— ಶ್ರೀ ಸಿದ್ಧಲಿಂಗಾಯನಮಃ —

ಉಡುತಡಿಯ

# ಅಕ್ಕಮಹಾದೇವೀ ಪುರಾಣಂ



ಪುಟ್ಟರಾಜಕವಿ ಕೃತಂ

ಶ್ರೀ ಪಂಚಾಕ್ಷರಿ ಗ್ರಂಥಮಾಲಾ ಪ್ರಥಮ ಪುಷ್ಪ

— ಜಯಸಿದ್ಧಲಿಂಗ —

ಉಡುತಡಿಯ

# ಅಕ್ಕಮಹಾದೇವೀ ಪುರಾಣಂ


ಬರೆದವರು—

ಸಾಹಿತ್ಯ ಸಂಗೀತ ವಿಶಾರದರಾದ

ಪಂ॥ ಪುಟ್ಟರಾಜ ಕವಿಗಳು





೧೯೫೭ * ಬೆಲೆ ೨—೮—೦

# ಪ್ರಕಾಶಕರ ಮಾತು



ಉಭಯ ಗಾನವಿಶಾರದ ತ್ರಿಭಾಷಾಸಾಹಿತ್ಯ ವಿಶಾರದ ಮೊದಲಾದ ಪದವೀದರರಾಗಿ ಕರ್ನಾಟಕಕ್ಕೆ ಇಷ್ಟೇ ಅಲ್ಲ ಭಾರತಕ್ಕೇನೇ ಚಿರಪರಿಚಿತರಾದ ಪಂ|| ಪುಟ್ಟಯ್ಯಸ್ವಾಮಿ (ಪುಟ್ಟರಾಜ ಕವಿ) ಗವಾಯಿಗಳು ಈ ಅಕ್ಕಮಹಾದೇವೀ ಪುರಾಣವೆಂಬ ದಿವ್ಯ ಕಾವ್ಯದರ್ಪಣವನ್ನು ಸಮಾಜದ ಮುಂದಿಟ್ಟಿದ್ದಾರೆ. ಕವಿಗಳು ಹುಟ್ಟುಗುರುಡರಿದ್ದು ಇಂಥ ಮಹಾಕಾವ್ಯವನ್ನು ಬರೆದದ್ದು ಕನ್ನಡಿಗರಿಗಷ್ಟೇ ಅಲ್ಲ, ಭಾರತೀಯರಿಗೇನೇ ಹೆಮ್ಮೆಯಮಾತು. ಕಾವ್ಯದ್ದು ಹಾಗೂ ಕವಿಗಳ ವಿಷಯವಾಗಿ ಏನನ್ನೂ ವಿವರಿಸಲಾರೆ ! ಯಾಕಂದರೆ ಈ ಕಾವ್ಯಾವಲೋಕನವಾದ ಮೇಲೆ ತಾವೇ ನಿರ್ಣಯಕ್ಕೆ ಬರುತ್ತೀರೆಂದು ನನ್ನ ಸಂಪೂರ್ಣ ವಿಶ್ವಾಸವಿದೆ ! ಕವಿಗಳ ಈ ಕಾವ್ಯವು ಅಮೂಲ್ಯ ರತ್ನವೇಂದೆ. ಹೇಳಬಲ್ಲೆ. ಕಾರಣ ಇದರ ಸದುಪಯೋಗವನ್ನು ಸಮಾಜವು ಸೌಹಾರ್ದಭಾವದಿಂದ ಮಾಡಿಕೊಳ್ಳುವದೆಂದು ನಂಬಿದ್ದೇನೆ !

ಅಂ. ಬ. ಹಿರೇಮಠ

ಶ್ರೀ ಮದವಿರಳ ಪರಂಜ್ಯೋತಿ

ಶ್ರೀ ಮುಜ್ಜಗದ್ಗುರು ತೋಂಟದ

ಸಿದ್ಧಲಿಂಗ ಶಿವಯೋಗಿಗಳ ಪಾದಗಳಲ್ಲಿ

ಈ ಗ್ರಂಥಪುಷ್ಪವನ್ನು

ಭಕ್ತಿಯಿಂದ

ಅರ್ಪಿಸಲಾಗಿದೆ.



ಉಡುತಡಿಯ ಶ್ರೀ ಅಕ್ಕಮಹಾದೇವಿಯವರು.




ಶ್ರೀ ಶಿವಯೋಗಮಂದಿರ ಸ್ಥಾಪಕರಾದ ಲಿಂಗೈಕ್ಯ
ಕುಮಾರಸ್ವಾಮಿಗಳು, ಹಾನಗಲ್ಲ.



ಶ್ರೀ ನಿ. ಪ್ರ. ಮೃತ್ಯುಂಜಯಸ್ವಾಮಿಗಳು ಮುರುಘಾಮಠ ಧಾರವಾಡ.



ಉಭಯಗಾನವಿಶಾರದ ಲಿಂಗೈಕ್ಯ ಪಂಚಾಕ್ಷರ ಗವಾಯಿಗಳು



ಸಾಹಿತ್ಯ ಸಂಗೀತ ವಿಶಾರದರಾದ ಪಂ. ಪುಟ್ಟರಾಜ ಕವಿಗಳು

# ಕವಿಯ ನಿವೇದನ



ಶ್ರೀ ಗುರುವಿನ ಕೃಪಾಕಟಾಕ್ಷದ ಬಲದಿಂದ ಹುಟ್ಟುಗುರುಡನಾಗಿದ್ದ ನಾನು ಕಾವ್ಯಲೋಕಕ್ಕೆ ಕೈಹಾಕಿ ಗುರುಪಂಚಾಕ್ಷರಗ್ರಂಥಮಾಲೆಯೆಂಬ ಹೆಸರಿನಿಂದ ಮೊದಲನೆಯ ಪುಷ್ಪವಾಗಿ ಶಿವಶರಣೆ ನೆಲ್ಲೂರ ನಂಬೆಕ್ಕ ಎಂಬ ಸಂಗೀತನಾಟಕವನ್ನು . ಬರೆದು ನಾಡಿಗೆ ನೀಡಿದ್ದೇನೆ ! ಅದರಂತೆ ಎರಡನೆಯ ಪುಷ್ಪವಾಗಿ ಈ ಅಕ್ಕಮಹಾದೇವೀಪುರಾಣವೆಂಬ ಮಹಾಕಾವ್ಯಕನ್ನಡಿಯನ್ನೂ ಕನ್ನಡ ಭಗಿನಿಯರ ಕೈಯಲ್ಲಿ ಅರ್ಪಿಸಿರುವೆನು. ಆದರೆ............... ಹುಟ್ಟುಗುರುಡನು ಕಾವ್ಯಗಳನ್ನು ಹೇಗೆ ಬರೆಯುವನು? ಅವನಿಗೆಲ್ಲಿ ಆ ಬುದ್ಧಿ ಶಕ್ತಿ ? ಎಂದು ಕೆಲವರು ಆಶ್ಚರ್ಯಪಡಬಹುದು ! ಕೆಲವರು ಹೊಗಳಬಹುದು ! ಕೆಲವರು ತೆಗಳಬಹುದು, ಶ್ರೀ ಗುರುವಿನೊಲಿಮೆಯಾದರೆ ಯಾವುದು ತಾನೆ ಅಸಾಧ್ಯ ? " ನೀನೊಲಿದರೆ ಕೊರಡು ಕೊನರುವದಯ್ಯ, ನೀನೊಲಿದರೆ ಬರಡು ಹಯನವಹುದಯ್ಯ, ನೀನೊಲಿದರೆ ವಿಷವು ಅಮೃತವಹುದಯ್ಯ, ನೀನೊಲಿದರೆ ಸಕಲ ಪಡಿಪದಾರ್ಥಗಳು ಇದರಲ್ಲಿಪ್ಪವು '' ಎಂದು ನುಡಿದ " ಬಸವ ಮಹಾನುಭಾವರ" ಅಮರವಾಣಿಯು ನೆನಪಿಗೆಬಾರದಿರದು ! ಶ್ರೀ ಗುರುವಿನೊಲಿಮೆಯಿಂದ ಅನೇಕರು ತಮ್ಮ ಇಷ್ಟಾರ್ಥಸಿದ್ಧಿ ಪಡೆದರಲ್ಲವೆ ?....

ಬಾಲ್ಯದಲ್ಲಿಯೇ ಭಾಗ್ಯದೇವನ ಸನ್ನಿಧಿಯನ್ನುಸೇರಿ. ಉಭಯ ಸಂಗೀತ ಮತ್ತು ತ್ರಿಭಾಷಾಸಾಹಿತ್ಯ, ಕಲೆಗಳನ್ನು ಅರಿತು, ಕನ್ನಡಿಗರ ಅರ್ಥಾತ್ ಭಾರತೀಯರ ಪ್ರೀತಿಪಾತ್ರನಾದೆನೆಂದು ಹೇಳಿಕೊಂಡರೆ ಆತ್ಮಸ್ತುತಿಯಾದೀತೆ ? ಇಲ್ಲ! ಇಲ್ಲ! ಶ್ರೀ ಗುರುವಿಗೆ ಶೋಭೆಯಾದೀತು. ಅಂಥ ಶ್ರೀಗುರುವಿನ ಪ್ರೇರಣೆಯಿಂದ ಈಮೊದಲು ಸಾಹಿತ್ಯ ಸೇವೆಯ ಪ್ರಥಮ ಸೋಪಾನವೆಂದು "ನೆಲ್ಲೂರ ನೆಂಬಕ್ಕ, ಭಗವಾನ್ ಬಸವೇಶ್ವರ, ಶ್ರೀ ಸಿದ್ಧರಾಮೇಶ್ವರ, ರಾಜಶೇಖರ, ಸತಿಸುಕಯ್ಯ, ಸಾಧ್ವೀಘೋಷಾದೇವಿ, ಮಹಾತ್ಮಾ ಫಕೀರಸ್ವಾಮಿದೇವರ ದುಡ್ಡು, ರತ್ನಹಾರ, ಮಿಂಚು" ಮೊದಲಾದ ಸಂಗೀತ ನಾಟಕಗಳನ್ನು ಬರೆದು ರಂಗಭೂಮಿಗೆ ಸಲ್ಲಿಸಿದ್ದೇನೆ! ಅದರಂತೆ "( ಹಾವೇರಿ ) ಶಿವಬಸವೇಶ್ವರಪುರಾಣ, ಗುರುಪಂಚಾಕ್ಷರೇಶ್ವರ ಪುರಾಣ, ಮೊದಲಾದ ಕನ್ನಡ ಕಾವ್ಯಗಳನ್ನಲ್ಲದೆ ರಾಷ್ಟ್ರಭಾಷೆಯಾದ ಹಿಂದಿಯಲ್ಲಿಯೂ ಶ್ರೀ ಬಸವಪುರಾಣವನ್ನು ಬರೆಯಲಾರಂಭಿಸಿದ್ದೇನೆ. ಅಂತು ಪೂಜ್ಯಗುರು ಪಂಚಾಕ್ಷರನ ಕೃಪಾವಿಶೇಷದಿಂದ ಪ್ರಾಪ್ತವಾದ ಸಂಗೀತವಿದ್ಯೆಯ ಸೇವೆಯಂತೂ ನನ್ನ

ಜನ್ಮವಿರುವ ಪರಿಯಂತರ ಅವರು ಸ್ಥಾಪಿಸಿದ ಶ್ರೀ ಕುಮಾರೇಶ್ವರಸಂಗೀತ ಸಾಹಿತ್ಯಮಹಾವಿದ್ಯಾಲಯವೆಂಬ ಮಹಾ ಸಂಸ್ಥೆಯ ಮುಖಾಂತರ ನಡೆದೇ ಯಿದೆ. ಅದರ ಜೊತೆಗೆ ಈ ಸಾಹಿತ್ಯ ಸೇವೆಯೂ ಸಲ್ಲುತ್ತಲಿದೆ! ಆದರೆ ಈ ನನ್ನ ಉಭಯ ಸೇವೆಯು ಪ್ರಗತಿಪರವಾಗಬೇಕಾದರೆ ಇದಕ್ಕೂ ಹೆಚ್ಚಾದ ಸಹಾಯಸಹಾನುಭೂತಿಗಳು ಸಮಾಜದಿಂದದೊರೆಯಬೇಕು ಮತ್ತು ಅವು ಸಿಕ್ಕೇ ತೀರುವವೆಂಬ ಸಂಪೂರ್ಣವಿಶ್ವಾಸವೂ ಧೈರ್ಯವೂ ನನಗಿದ್ದೇಯಿದೆ. ಯಾಕಂದರೆ ನಾನು ಹುಟ್ಟುಗುರುಡನೆಂಬುದು ತಮಗೆ ವಿದಿತವಾದ ಮಾತು. ಅಂದಮೇಲೆ ಕೈಹಿಡಿದು ಕರೆದೊಯ್ಯಲಿಕ್ಕೆ ಬೇರೊಬ್ಬರ ಅಗತ್ಯವು ಬೇಕೇ ಬೇಕು. ಅಸ್ತು. ಈ ಕಾವ್ಯವನ್ನು ಬರೆದಮೇಲೆ ಧನದ ಅಭಾವದಮೂಲಕ ಅಚ್ಚಾಗದೆ ಹಾಗೇ ಉಳಿಯಿತಲ್ಲಾ ಎಂದು ಆಲೋಚನೆಯಲ್ಲಿದ್ದೆ. ಆದರೆ ಜದ ಕ್ಕೊಂದು ಸಂಧಿಯನ್ನು ಶಿವನು ದೊರಕಿಸಿದನು. ಪೂರ್ವದಿಂದಲೂ ನನ್ನ ಹಾಗೂ ನನ್ನ ಗುರುಗಳಾದ ಪಂ. ಪಂಚಾಕ್ಷರಗವಾಯಿಗಳನ್ನೂ ಅಕ್ಕರತೆ ಯಿಂದ ಕಾಣುತ್ತ ಕಾಲಕ್ಕೆ ತಕ್ಕ ಸಹಾಯ ಸಹಾನುಭೂತಿಯನ್ನೂ ತೋರಿ ಸುತ್ತ ಸಂಸ್ಥೆಯ ಹಿತಚಿಂತಕರಾಗಿ ಆಶೀರ್ವದಿಸುತ್ತಿರುವಪರಮಪೂಜ್ಯ ಧಾರ ವಾಡದ ಮುರುಘಾಮಠದ ಶ್ರೀ ಮೃತ್ಯುಂಜಯಮಹಾಸ್ವಾಮಿಗಳು ಈ ವರ್ಷ ಮಾರ್ಗಶಿರಮಾಸದ ಶ್ರೀ ಶಿವಯೋಗೀಶ್ವರ ಯಾತ್ರಾಮಹೋತ್ಸವದ ಕಾರ್ಯ ನಿಮಿತ್ತವಾಗಿ ನನ್ನನ್ನು ಕರೆಸಿಕೊಂಡು ನನ್ನಿಂದಲೇ ಈ ಅಕ್ಕಮಹಾದೇವೀ ಪುರಾಣಪ್ರವಚನವನ್ನು ಒಂದು ತಿಂಗಳವರೆಗೆ ಜರುಗಿಸಿ ಈ ಕೃತಿ ಯನ್ನು ಅಲ್ಲಿ ಸಮ್ಮಿಲಿತರಾಗಿದ್ದ ವಿದ್ವಾಂಸರನೇಕರಿಗೆ ತೋರಿಸಿ ತಮ್ಮ ಅಮೂಲ್ಯವಾದ ವಿದ್ಯಾಪ್ರೋತ್ಸಾಹವನ್ನು ವ್ಯಕ್ತಮಾಡಿ ಈ ಗ್ರಂಥವನ್ನು ಅಚ್ಚು ಮಾಡಿಸಲು ಬೇಕಾಗುವ ಕಾಗದದಹೊಣೆಯನ್ನು ಹೊತ್ತು ಸಕಾಲಕ್ಕೆ ದಯ ಪಾಲಿಸಿದರು.

## ಕಾವ್ಯವಿಚಾರ

ಕಾವ್ಯಕ್ಕೆ ಕೈಹಾಕಿದ್ದು ನಾನು ಇದೇ ಮೊದಲು! ಈ ಶೈಲಿಯನ್ನುನಾನು ಕನ್ನಡನಾಡಿನ ಕೀರ್ತಿಕಾಯ ಕವಿಶ್ರೇಷ್ಠರಾದ ಲಿಂ॥ ಪಂ॥ ಚೆನ್ನಕವಿಗಳು ಧ್ಯಾಂಪುರ ಇವರ ಕಾವ್ಯಗಳನ್ನು ಓದಿನೋಡಿ ಕಲಿತದ್ದು! ಆಮಹಾನುಭಾವರ ವಿಶೇಷವಾದ ಪ್ರೇಮವೇ ಈ ಕಾವ್ಯರಂಗಕ್ಕೆ ಬೆಳಕು ಚೆಲ್ಲಿದ ಚಿಜ್ಯೋತಿ. ಆದರೆ ಇದರಲ್ಲಿ ಅನೇಕದೃಷ್ಟಿಯಿಂದ ತಪ್ಪುಒಪ್ಪುಗಳಿರಬಹುದು ಅವುಗಳನ್ನು. ಅಭಿ ಮಾನಿಗಳೆಲ್ಲಾ ಹಂಸಕ್ಷೀರನ್ಯಾಯದಂತೆ ಗ್ರಹಿಸಬೇಕೆಂದು ವಿನಂತಿ ಮಾಡಿಕೊ ಳ್ಳುತ್ತೇನೆ. ಈ ಕಾವ್ಯವನ್ನು ಎರಡು ದೃಷ್ಟಿಯಿಂದ ರಚಿಸಲಾಗಿದೆ. ಅದೇನಂದರೆ

ಒಂದು ಲೌಕಿಕವಿಚಾರ ಒಂದು ಪಾರಮಾರ್ಥಿಕವಿಚಾರ. ಲೌಕಿಕವಾಗಿ ಅಕ್ಕನ ಸಂಪೂರ್ಣಬಾಳಿನ ಒಳಗುಟ್ಟನ್ನು ಸಂಸಾರಿಗಳಾದವರಿಗೆ ಅನುಕೂಲವಾಗುವಂತೆ ರಚಿಸಲಾಗಿದೆ. ಪಾರಮಾರ್ಥಿಕವಾಗಿ ಅಕ್ಕನುಯಾರು ? ಆಕೆಯಬಾಳಿನ ಬಗೆಹೇಗೆ ? ಎಂಬುದನ್ನು ಈ ಶರೀರಕ್ಕೆ ಹೋಲಿಸಿ ತತ್ವವಿಚಾರವನ್ನಿಟ್ಟು ಬರೆಯಲಾಗಿದೆ. ಅಕ್ಕನ ಜೀವನಚಿತ್ರವನ್ನು ಅನೇಕರು ಅನೇಕವಿಧವಾಗಿ ಚಿತ್ರಿಸಿದ್ದಾರೆ. ಲಗ್ನವಾಗಿದ್ದಾಳೆಂದು ಕೆಲವರು, ಲಗ್ನವಾಗಿಲ್ಲವೆಂದು ಕೆಲವರು. ಈ ಎರಡೂ ವಿಚಾರಗಳನ್ನು ತುಲನೆಮಾಡಿ ನಾನು ನನ್ನ ಬುದ್ಧಿಗೆ ನಿಲುಕಿದಷ್ಟು ಬರೆದಿದ್ದೇನೆ ಅಕ್ಕನು ಲಗ್ನವಾಗಿದ್ದರೆ ಅವಳ ಉಚ್ಚ ಧ್ಯೇಯವಾದ ಚೆನ್ನಮಲ್ಲಿಕಾರ್ಜುನನೇ ಗಂಡನೆನಗೆ ಮಿಕ್ಕಲೋಕದ ಗಂಡರು ಎನಗೆ ಸಂಬಂಧವಿಲ್ಲವೆಂಬ ಮಹಾ ಕಾವ್ಯದ ಗತಿಯೇನು ? ಒಂದುವೇಳೆ ಲಗ್ನವಾಗಿದ್ದರೆ ಭವಿಯನೊಲ್ಲೆನು ಎಂದು ಏಕೆಉಸುರಿದಳು ? ಲಗ್ನವಾಗಿದ್ದರೆ ಲೋಕದ ಸಾಮಾನ್ಯ ಸ್ತ್ರೀಯರ ಪಂಕ್ತಿಯಲ್ಲಿರುತ್ತಿದ್ದಳು ! ಆಕೆಯ ಜೀವನ ಅಷ್ಟೊಂದು ಉಜ್ವಲವಾಗುತ್ತಿದ್ದಿಲ್ಲ ! ಅಸ್ತು; ಆ ವಿಚಾರವನ್ನು ನಾನು ಇಲ್ಲಿ ವಿಶೇಷವಾಗಿ ವಿವರಿಸದೆ ಅಕ್ಕನ ಆದರ್ಶ ಜೀವನವು ಜಗತ್ಕಲ್ಯಾಣಕ್ಕೆಂದೇ ವಿವರಿಸುತ್ತೇನೆ.

## ಆಭಾರ ಮನ್ನಣೆ

ಈ ನನ್ನ ಕಾವ್ಯಕನ್ನಡಿಯು ಪ್ರಕಾಶಕ್ಕೆ ಬರಲು ಸರ್ವಭಾರ ಹೊತ್ತು ಪ್ರೇರಕರಾದ ಪರಮಪೂಜ್ಯ ಮೃತ್ಯುಂಜಯಮಹಾಸ್ವಾಮಿಗಳಿಗೆ ಮೊದಲು ಅನಂತ ವಂದನೆಗಳನ್ನು ಅರ್ಪಿಸುತ್ತೇನೆ ! ಮತ್ತು ಕಾವ್ಯವನ್ನು ಸಂಪೂರ್ಣವಾಗಿ ಓದಿ ಅದಕ್ಕೆ ತಕ್ಕ ವಿಚಾರಗಳನ್ನು ಕಲ್ಪಿಸಿಕೊಟ್ಟ ಪಂ॥ ಸದಾಶಿವ ಶಾಸ್ತ್ರಿಗಳು ಹುಕ್ಕೇರಿ, ಪಂ॥ ನಾಗಭೂಷಣಶಾಸ್ತ್ರಿಗಳು ಗದಗ, ಅಯ್ಯನಗೌಡ ಮಾಸ್ತರ ಗದಗ ಮೊದಲಾದವರಿಗೆ ನಾನು ಯಾವ ಶಬ್ದ ಸಂಪತ್ತಿನಿಂದ ಗೌರವಿಸಿದರೂ ಅಲ್ಪವೇ ಆಗಬಹುದು ! ಇನ್ನು ಈ ಕಾವ್ಯ ಕನ್ನಡಿಯು ಕಾಂತಿಯುಕ್ತವಾಗುವಂತೆ ಪಂ॥ ನಾಗಭೂಷಣ ಶಾಸ್ತ್ರಿಗಳು, ತಮ್ಮ ಅಮೋಘವಾದ ಮುನ್ನುಡಿಯೆಂಬ ಚಿನ್ನದ ಕಟ್ಟಿನಿಂದ ಶೋಭೆಗೊಳಿಸಿದ್ದಾರೆ ! ಅದಕ್ಕೆ ಆಸ್ಥಾನ ವಿದ್ವಾನ್ ಕವಿಪಂಡಿತ ಬಳ್ಳಾರಿಯ ವೈ. ನಾಗೇಶಶಾಸ್ತ್ರಿಗಳು ತಮ್ಮ ಅಮೂಲ್ಯವಾದ ಅಭಿಪ್ರಾಯದಿಂದ ಒಪ್ಪು ಹಾಕಿದ್ದಾರೆ ! ಈ ಮಹನೀಯರು ನನ್ನ ಆತ್ಮೀಯರೇ ಆದಕಾರಣ ಇವರ ಆಭಾರವನ್ನು ನಾನು ಮನ್ನಿಸಿದರೆ ನನ್ನವರನ್ನು ನಾನೇ ಹೊಗಳಿದಂತೆಯಾದೀತು ! ಇನ್ನು ಈ ಕಾವ್ಯದ ಚ್ಛಿನ ಸರ್ವ ವೆಚ್ಚವನ್ನು ವಹಿಸಿಕೊಂಡು ಧನಸಹಾಯ ಸಲ್ಲಿಸಿದ ಪ್ರಿಯಶಿಷ್ಯ

ಚೆನ್ನಬಸವಾರ್ಯ ಕಂಬಾಳಿಮಠ ನರೇಗಲ್ಲ ಮತ್ತು ನೃಡದೇವಯ್ಯ ಹೊಸಳ್ಳಿ ಇವರೀರ್ವರಿಗೆ ಸದಾ ಸುಖಸಂಪತ್ತನ್ನು ಕೋರುತ್ತೇನೆ. ಕೆಲಸಗಾರರ ಅಭಾವ ದಲ್ಲಿ ಮತ್ತು ಅತ್ಯವಸರದ ವೇಳೆಯಲ್ಲಿಯೂ ಕೂಡಾ ಹೆಚ್ಚು ಶ್ರಮವಹಿಸಿ ತೀವ್ರವಾಗಿ ಅಂದವಾದ ಮುದ್ರಣಮಾಡಿದ ಶ್ರೀ ಸಿದ್ಧಲಿಂಗವಿಜಯ ಮುದ್ರ ಣದ ಮಾಲಕರಿಗೂ ಮತ್ತು ಕೆಲಸಗಾರರಿಗೂ ನಾನು ಹಾ ರ್ದಿ ಕ ಆಭಾರ ಮನ್ನಿಸುತ್ತೇನೆ ! ಇನ್ನೊಂದು ಮಹತ್ವದ ಮಾತು ! ಅದೇನಂದರೆ ಈ ಕಾವ್ಯ ರಚನೆಗೆ ಮೊದಲು ಸೂಚಿಸಿ ಪ್ರೇರಕರಾದ ಗೊಗ್ಗಿಹಳ್ಳಿ ನಿಜಗುಣ ಪಟಾಧ್ಯ ಕ್ಷರ ನೆನಹು. ಈ ಮಹಾನುಭಾವರನ್ನು ನಾನು ಯಾವರೀತಿಯಿಂದ ಯಾವ ಶಬ್ದದಿಂದ ಸ್ತೋತ್ರಮಾಡಲಿ ? ಮೊದಲು ದಾರಿದೋರಿದ ಪುಣ್ಯಪುರುಷರಿ ವರು. ಅಂದಮೇಲೆ ಇವರು ನನ್ನ ಹೃದಯಮಂದಿರದಲ್ಲಿ ಮಹಾಮೂರ್ತಿಗಳ ಳಾಗಿರಲಿ ! ಮುಂದಿನ ಕೃತಿಗಳಿಗೆ ಆಶೀರ್ವಾದವೀಯಲಿ ! ಮತ್ತು ಈ ಕಾವ್ಯ ಪ್ರಕಾಶಕ್ಕೆ ಮುಂದೆ ಬಂದು ಶ್ರಮವಹಿಸಿದ ಸಂಸ್ಥೆಯ ಕಾರಭಾರಿ ವೇ|| ಅನ್ನ ದಾನಯ್ಯಹಿರೇಮಠ ಇವರಿಗೂ ಸದಾ ಸುಖಸಂಪತ್ತನ್ನು ಕೋರುತ್ತೇನೆ. ಕೊನೆ ಯದಾಗಿ ಮೊದಲು ಇದನ್ನು ಕುರುಡಲಿಪಿಯಲ್ಲಿ ಬರೆದ ಹುಟ್ಟುಗುರುಡ ಸೊಕ್ಕಿ ಸಿದ್ವೀರಪ್ಪ ಮತ್ತು ಅಚ್ಚಿಗಾಗಿ ಅಲ್ಪಾವಧಿಯಲ್ಲಿಯೇ ಸ್ವಚ್ಛಾಕ್ಷರಗಳಿಂದ ಬರೆದುಕೊಟ್ಟ ಪ್ರಿಯಶಿಷ್ಯ ಚಿ|| ಬಸವರಾಜ ( ಹೂಗಾರ ) ತಾಳಕೇರಿ ಇವರೀ ರ್ವರಿಗೆ ಆಯುರಾರೋಗ್ಯ ಭೋಗಭಾಗ್ಯಗಳನ್ನು ಬಯಸಿ ಈ ಕಾವ್ಯವು ಸರ್ವರಸೊತ್ತಾಗಿ ಪ್ರೀತಿ ಸೌಹಾರ್ದಗಳಿಂದ ಬೆಳಗಲೆಂದೂ ಮುಂದಿನ ಕೃತಿಗೆ ಯಶದ ದಾರಿಯನ್ನು ತೋರಲೆಂದೂ ವಾಚಕ ಬಂಧುಭಗನಿಯರಿಗೆ ವಿನಂತಿ ಮಾಡಿಕೊಂಡು ಈ ಕೃತಿಯ ಅಧಿದೇವತೆಯನ್ನು ಪ್ರಾರ್ಥಿಸಿ ವಿಶ್ರಮಿಸುತ್ತೇನೆ.

ತಾ. ೧೦—೦—೦ ಗದಗ ವೀರೇಶ್ವರ ಪುಣ್ಯಾಶ್ರಮ



# ಮುನ್ನುಡಿ



ಶ್ರೀ ಅಕ್ಕಮಹಾದೇವೀಪುರಾಣವನ್ನು ಹುಟ್ಟುಗುರುಡರಾದ ಪುಟ್ಟರಾಜ ಕವಿಗಳು ಬರೆದಿರುವರೆಂದು ಹೇಳಿದರೆ ಬಹುಜನರಿಗೆ ತಟ್ಟನೆ ಆಶ್ಚರ್ಯವೆನಿಸಬಹುದು. ಯಾಕಂದರೆ ಇಂಥ ಮಹತ್ವದಕೃತಿಗಳನ್ನು ನಿರ್ಮಿಸಲು ಕಣ್ಣಿದ್ದವರಿಗೆ ಮಾತ್ರಸಾಧ್ಯವೆಂಬುವದೇ ಬಹುಜನರ ತಿಳಿವಳಿಕೆ. ಅವರ ಈ ತಿಳಿವಳಿಕೆಯು ಪೂರ್ಣ ಅಸತ್ಯವೆಂದು ಹೇಳಲಿಕ್ಕಾಗದಿದ್ದರೂ, ಪೂರ್ಣಸತ್ಯವಾದದುದೆಂದು ಹೇಳಲಿಕ್ಕೆಬರುವದಿಲ್ಲ. ನಿಜವಾದ ಕಣ್ಣಿನ ಕಲ್ಪನೆಯು ಬಹುಜನರಿಗಿಲ್ಲದಿರುವದೇ ಇದಕ್ಕೆ ನಿಮಿತ್ತವಾಗಿದೆ. ಹೊರದೃಷ್ಟಿಯನ್ನು ಕಳೆದುಕೊಂಡವರನ್ನಷ್ಟೇಕುರುಡರೆಂದು ಹೇಳುವದೇ ಬಹಳ. ಇದಕ್ಕಿಂತ ಹೆಚ್ಚಿನ ದಡ್ಡತನ ಮತ್ತೊಂದಿಲ್ಲ. ಒಳದೃಷ್ಟಿಯನ್ನು ಕಳೆದುಕೊಂಡವರೇ ನಿಜವಾದ ಕುರುಡರು. ಇಂಥಕುರುಡತನವನ್ನು ಎಷ್ಟೋಜನ ಸಾಧುಸಂತರು ಆತ್ಮಸಂತೋಷದಿಂದ ಪಡೆದುಕೊಂಡಿದ್ದರೆಂಬುದನ್ನು ಇತಿಹಾಸದಲ್ಲಿ ನೋಡಿದಾಗಂತೂ ಹೊರಗಣ್ಣನ್ನು ಕಳೆದುಕೊಂಡವರಲ್ಲಿ ಸಹಜವಾಗಿಯೇ ಪ್ರೇಮಾದರಗಳುಂಟಾಗುವವು. ಪುಟ್ಟರಾಜರು ಹೊರಗಣ್ಣನ್ನು ಕಳೆದುಕೊಂಡಿದ್ದರೂ ಒಳಗಣ್ಣನ್ನು ಪಡೆದವರಾಗಿದ್ದಾರೆ. ಇಂಥ ಭಾಗ್ಯಶಾಲಿಗಳುತೀರ ವಿರಳ.

ಪುಟ್ಟರಾಜ ಕವಿಗಳು ಹಾನಗಲ್ಲ ಲಿಂಗೈಕ್ಯ ಕುಮಾರ ಶಿವಯೋಗಿಗಳ ಕೃಪೆಯನ್ನು ಪಡೆದವರೂ, ಉಭಯಗಾನ ವಿಶಾರದರೂ, ಲಿಂಗನಿಷ್ಠರೂ, ಆಜನ್ಮಬ್ರಹ್ಮಚಾರಿಗಳೂ ಸಮಾಜಸೇವಾನಿಷ್ಠರೂ ಆಗಿದ್ದ ಪಂಚಾಕ್ಷರಗವಾಯಿಗಳವರ ಪ್ರಧಾನ ಶಿಷ್ಯರು. "ಗುರುಶಿಷ್ಯಸಂಬಂಧವಾದದುಕ್ಕೆ ಆವುದು ಚಿಹ್ನ? ಕಿಚ್ಚಿನೊಳಗೆ ಕೋಲ ಬಚ್ಚಿಟ್ಟಂತಿರಬೇಕು'' ಎಂಬ ಮಹಾನುಭಾವಿಗಳ ಉಕ್ತಿಯನ್ನನುಸರಿಸಿ ಇವರು ತಮ್ಮ ಗುರುಗಳಲ್ಲಿದ್ದ ಸಂಗೀತ ವಿದ್ಯೆಯನ್ನೆಲ್ಲಾಹೀರಿಕೊಂಡು ತಾವೂ ಉಭಯಗಾಯನವಿಶಾರದರಾಗಿರುವರಲ್ಲದೆ ಕನ್ನಡ ಸಂಸ್ಕೃತ ಹಿಂದಿ ಸಾಹಿತ್ಯಗಳಲ್ಲಿಯೂ ಸರಿಯಾದ ಯೋಗ್ಯತೆಯನ್ನು ಪಡೆದು ಕೊಂಡಿರುವರು. ಇವರಲ್ಲಿ ಸಂಗೀತದ ಜೊತೆಗೆ ಸಾಹಿತ್ಯವೂ ಸೇರಿಕೊಂಡಿದ್ದರಿಂದ ಹಾಲಿನಲ್ಲಿ ಸಕ್ಕರೆಯನ್ನು ಬೆರಸಿದಂತಾಗಿದೆ ಇವರ ಜೀವನ. ಇಷ್ಟರಲ್ಲಿಯೇ ಇವರು ಕೆಲವು ನಾಟಕಗಳನ್ನು ಬರೆದಿರುವರು. ಅವೆಲ್ಲಾ ಕನ್ನಡದ ರಂಗಭೂಮಿಯ ಮೇಲೆ ಬಂದು ರಸಿಕರಮನಸ್ಸನ್ನು ತಣಿಸಿಬಿಟ್ಟಿವೆ. ಶ್ರಾವ್ಯನಾಟಕಗಳಿಗಿಂತ ದೃಶ್ಯನಾಟಕಗಳನ್ನು

ಬರೆಯುವದು ಬಹುಕಷ್ಟ. ಅದರಲ್ಲಿಯೂ ದೃಷ್ಟಿಯಿಲ್ಲದವರು ಬರೆಯುವದೆಂದರೆ ಅತ್ಯಂತ ಆಶ್ಚರ್ಯಕರ. ಇದು ಶಿವನಕೃಪೆಯನ್ನು ಪಡೆದವರಿಗಲ್ಲದೆ ಮತ್ತಾರಿಗೂ ಸಾಧ್ಯವಿಲ್ಲ.

ಇವರು ತಮ್ಮಗುರುಗಳಂತೆ ಬ್ರಹ್ಮಚಾರಿಗಳೂ, ಲಿಂಗನಿಷ್ಠರೂ, ಆಗಿದ್ದು ಬಹು ದಿನಗಳಿಂದ ನಡಿಸಿಕೊಂಡು ಬಂದ ತಮ್ಮ ಗುರುಗಳ ಸಂಗೀತಮಹಾವಿದ್ಯಾಲಯದ ಗುರುತರವಾದ ಭಾರವನ್ನು ಹೊತ್ತುಕೊಂಡು ನೂರಾರುಜನ ವಿದ್ಯಾರ್ಥಿಗಳಿಗೆ ಪ್ರಸಾದದ ವ್ಯವಸ್ಥೆಯನ್ನುಮಾಡಿ ಬಹುದಕ್ಷತೆಯಿಂದ ಅದನ್ನು ನಡಿಸುತ್ತಿರುವದೂ, ಕುರುಡರಿಗೆ ಬಹಳ ಆಶ್ರಯವನ್ನು ನೀಡಿರುವದೂ, ಕನ್ನಡ ನಾಡಿನ ಮೂಲೆ ಮೂಲೆಗಳಲ್ಲಿ ಇವರ ಶಿಷ್ಯರು ಸ್ವಾವಲಂಬಿಗಳಾಗಿ ನಾಡುದೇವಿಯ ಹೃದಯಾನಂದಕರರಾಗಿರುವದೂ, ಇವರ ಸಂಸ್ಥೆಯ ಮಹತ್ವಾತಿಶಯದ ಕುರುಹು. ಕನ್ನಡನಾಡಿನ ಭಾಗ್ಯಸೂಚಕ.

ಇಂಥಕತೃತ್ವಶಾಲಿಗಳಾಗಿದ್ದ ಪುಟ್ಟರಾಜರು ಬರೆದ ಅಕ್ಕನ ಚರಿತ್ರವು ಮಾನವ ಜನಾಂಗಕ್ಕೊಂದು ದೈವೀ ಪ್ರಸಾದಭೂತವಾಗಿದೆ. ಮಹದೇವಿಯಕ್ಕನನ್ನು ಆಕೆಯ ಸಮಕಾಲೀನರಾಗಿದ್ದ ಭಕ್ತಿಭಾಂಡಾರಿ ಬಸವಣ್ಣ, ಸಮ್ಯಗ್‌ಜ್ಞಾನಿ ಚೆನ್ನಬಸವಣ್ಣ, ಪರಮವೈರಾಗ್ಯಶೀಲ ಪ್ರಭುದೇವ, ಶಿವಯೋಗಸಂಪನ್ನ ಸಿದ್ಧರಾಮ ಮುಂತಾದ ಪ್ರಮಥಾಗ್ರಗಣ್ಯರು ಮುಕ್ತಕಂಠದಿಂದ ಹೊಗಳಿರುವದನ್ನು ನೋಡಿದರೆ ಅಕ್ಕನವರ ದಿವ್ಯ ವ್ಯಕ್ತಿತ್ವದ ಸತ್ಯಕಲ್ಪನೆಯಚಿತ್ರವು ಕಣ್ಮುಂದೆ ಕಟ್ಟಿದಂತಾಗುವದು. ಭಾಷೆಯು ಭಾವದ ವ್ಯಕ್ತಸ್ವರೂಪ ಅದರಿಂದಲೇವ್ಯಕ್ತಿಯ ಯೋಗ್ಯತೆಯ ಪರಿಚಯವಾಗುವದು. ಆದಕ್ಕಾಗಿ ಅಕ್ಕನವರ ದಿವ್ಯ ವ್ಯಕ್ತಿತ್ವದ ಬಗ್ಗೆ ಆಕೆಯ ವಚನಗಳೇ ದೊಡ್ಡಪ್ರಮಾಣಗಳಾಗಿರುವವು. ಮಹಾಜ್ಞಾನಿ ಚೆನ್ನಬಸವಣ್ಣನವರು ಅಕ್ಕನವರ ಅನುಭವದ ಮಹತ್ವವನ್ನು ತಿಳಿದುಕೊಂಡು ಆಕೆಯ ದಿವ್ಯ ಜೀವನದ ಚಿತ್ರವನ್ನು ಚಿತ್ರಿಸಿದ ವಚನವಿಂತಿದೆ.

ಆದ್ಯರ ಅರವತ್ತುವಚನಕ್ಕೆ ದಣ್ಣಾಯಕರ<br>ಇಪ್ಪತ್ತುವಚನ. ದಣಾಯಕರ ಇಪ್ಪತ್ತು<br>ವಚನಕ್ಕೆ ಪ್ರಭುದೇವರ ಹತ್ತುವಚನ,<br>ಪ್ರಭುದೇವರ ಹತ್ತು ವಚನಕ್ಕೆ ಅಜಗ<br>ಣ್ಣನ ಐದು ವಚನ, ಅಜಗಣ್ಣನ ಐದು<br>ವಚನಕ್ಕೆ ಕೂಡಲ ಸಂಗಯ್ಯನಲ್ಲಿ ಮಹಾ<br>ದೇವಿಯಕ್ಕನ ಒಂದು ವಚನ, ನಿರ್ವಚನ<br>ಕಾಣಾ ಸಿದ್ಧರಾಮಯ್ಯ

ಹಿಂದೆ ಮಹಾದೇವಿಯಕ್ಕನ ಚರಿತ್ರೆಯನ್ನು ಮಹಾಕವಿ ಹರಿಹರ ಚಾಮರಸ ಸಿದ್ಧವೀರಣ್ಣೊಡೆಯ ಚೆನ್ನಬಸವಾಂಕ, ರಾಚಯ್ಯ ಕವಿ ಮುಂತಾದವರು ರಗಳೆ ಪುರಾಣ, ಶೂನ್ಯಸಂಪಾದನೆ, ಸಾಂಗತ್ಯರೂಪದಲ್ಲಿ ಬರೆದಿರುವರು. ಅಕ್ಕನವರೇ ಅಕ್ಕನಪೀಠಿಕೆ, ಯೋಗಾಂಗತ್ರಿವಿಧಿ, ಷಟ್‌ಸ್ಥಲವಚನ, ಸೃಷ್ಟಿವಚನಗಳನ್ನು ರಚಿಸಿರುವರು.

ಹರಿಹರ ಚೆನ್ನಬಸವಾಂಕರು ಅಕ್ಕನವರಿಗೆ ವಿವಾಹವಾಗಿತ್ತೆಂದುಹೇಳಿದ್ದಾರೆ. ವೈವಾಹಿಕಜೀವನವೇನೂ ಕೆಟ್ಟದ್ದಲ್ಲ ಆದರೆ ಭವಿಯಾದ ಕೌಶಿಕನೊಡನೆ ವೈವಾಹಿಕಜೀವನವನ್ನು ನಡಿಸುವದು ಅಕ್ಕನ ಆದರ್ಶನಕ್ಕೆ ಭಂಗವನ್ನುಂಟುಮಾಡದಿರದು. ಕಾಮಾಂಧನಾದ ಕೌಶಿಕನು ಧರ್ಮದ ಅವಹೇಲನಮಾಡಿ ಮಾದೇವಿಯೊಡನೆ ಶರೀರಸಂಬಂಧವನ್ನು ಮಾಡಲು ಬಲತ್ಕಾರ ಮಾಡಿರಬಹುದು. ಪಾವನ ಚರಿತ್ರಳಾದ ಮಹಾದೇವಿಯು ಅದಕ್ಕೆ ಹೇಸಿಕೊಂಡು ಕೊನೆಗೆ ದೇಹಾಭಿಮಾನವನ್ನೇ ತೊರೆದು ದೇವಾಭಿಮಾನಿಯಾಗಿ ಕಲ್ಯಾಣದತ್ತ ಬತ್ತಲೆ ಹೊರಟುಹೋಗಿದ್ದಾಳೆ. ಇದು ಆಕೆಯ ಮಹಾವ್ಯಕ್ತಿತ್ವಕ್ಕೆ ಅತ್ಯಂತ ಭೂಷಣವಾಗಿದೆ "ಸಾವಿಲ್ಲದ ಕೇಡಿಲ್ಲದ, ರೂಹಿಲ್ಲದ, ಚಲುವಂಗಾನೊಲಿದೆನವ್ವ..............ಹರನೇಗಂಡನಾಗಬೇಕೆಂದು ಬಹು ಬಹುಕಾಲ ತಪಿಸಿದ್ದೆನೊಡವ್ವ" ಎಂಬಮಹಾದೇವಿಯ ವಚನಗಳು ಆಕೆಯ ಲಿಂಗಾಭಿಮಾನದ್ಯೋತಕಗಳಾಗಿವೆ. ಅದಕ್ಕಾಗಿಯೇ ಮಹಾನುಭಾವಿಗಳಾದ ಚಾಮರಸಕವಿಗಳು; ಸಿದ್ಧವೀರಣ್ಣೊಡೆಯರು ಮಹಾದೇವಿಯ ವೈವಾಹಿಕಜೀವನವನ್ನು ಬಿಟ್ಟು ವೈರಾಗ್ಯದ ಆದರ್ಶಜೀವನವನ್ನು ಚಿತ್ರಿಸಿದ್ದಾರೆ. ಪುಟ್ಟರಾಜರೂ ಇದೇಮಾರ್ಗಹಿಡಿದು ಅಕ್ಕನವರ ಚರಿತ್ರವನ್ನು ತಮ್ಮ ಪುರಾಣದಲ್ಲಿ ಚಿತ್ರಿಸಿರುವರು. ಅಕ್ಕನವರ ಜೀವನದಬಗ್ಗೆ ಇನ್ನೂಹೆಚ್ಚಾಗಿ ಸಂಶೋಧನ ನಡೆಯಬೇಕೆಂದು ನಮ್ಮ ಅಭಿಪ್ರಾಯ. ಈ ಕವಿಗಳ ಭಾಷಾಶೈಲಿಯು ಬಹಳ ಮನೋಹರವಾಗಿರುವದು. ಅಲ್ಲಲ್ಲಿ ಅಕ್ಕನವರ ವಚನಗಳನ್ನೇ ಪದ್ಯರೂಪದಲ್ಲಿ ಹೇಳಿದ್ದು ಇವರ ಕವಿತಾಚಾತುರ್ಯವನ್ನು ವ್ಯಕ್ತಗೊಳಿಸುತ್ತದೆ. ಇಂಥ ಅನೇಕ ಕೃತಿಗಳು ಈ ಕವಿಗಳಿಂದ ಹೊರಬೀಳುವಂತೆ ಸಿದ್ಧಲಿಂಗನು ಕೃಪೆಮಾಡಲಿ.

ಗದಗ ತಾ. ೨೮-೧೦-೫೭.

ಪಂ. ನಾಗಭೂಷಣಶಾಸ್ತ್ರಿಗಳು
ಸಾವಧಾನ ಸಂಪಾದಕರು.

# ಅಭಿಪ್ರಾಯ

ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಹಾನಗಲ್ಲ ಶ್ರೀ ಕುಮಾರಸ್ವಾಗಳು ಧರ್ಮೋದ್ಧಾರ ಮೂರ್ತಿಗಳು. ಇವರ ಕೃಪಾವಿಶೇಷದಿಂದ ಪ್ರೋಷಿತರಾಗಿ ಸಂಗೀತ ವಿದ್ಯಾವಿಶಾರದರಾದವರು ಲಿಂಗೈಕ್ಯರಾದ ವೇ. ಪಂಚಾಕ್ಷರ ಗವಾಯಿಗಳು- ಈ ಸ್ವಾಮಿಗಳು ಸದಾಚಾರಸಂಪನ್ನರಾಗಿ ಕನ್ನಡನಾಡಿನ ಅನೇಕ ಬಾಲಕರಿಗೆ ತಮ್ಮ ವಿದ್ಯಾದಾನವನ್ನುಮಾಡಿ ಕೀರ್ತಿಕಾಯರಾಗಿರುವರು- ಇವರ ಪಟ್ಟಶಿಷ್ಯ ರಾದ ವೇ. ಪುಟ್ಟಯ್ಯಗವಾಯಿಗಳು ಶ್ರೀಕುಮಾರೇಶ್ವರಕೃಪಾಪ್ರೋಷಿತ ಸಂಗೀತ ಸಾಹಿತ್ಯ ಮಹಾವಿದ್ಯಾಲಯವೆಂಬ ಸಂಸ್ಥೆಯ ಮೂಲಕವಾಗಿ ತಮ್ಮ ಗುರುಗಳ ಪವಿತ್ರಕಾಯಕವನ್ನು ಮುಂದುವರಿಸುವಹೊಣೆಯನ್ನು ಹೊತ್ತಿರು ವುದು ಸರ್ವವಿದಿತವು. ಈಬಗೆಯ ಕಾರ್ಯಭಾರದಲ್ಲಿಯೂ ವೀರ ವಿರಾಗಿಯಾಗಿ ಕನ್ನಡನಾಡಿನ ಅಕ್ಕನಾಗಿ ಬೆಳಗುವ ಅಕ್ಕಮಹಾದೇವಿಯಪುರಾಣವನ್ನು ಕನ್ನ ಡದ ಸರಳಶೈಲಿಯಲ್ಲಿ ರಚಿಸಿರುವರು. ಇವರ ಪುರಾಣದಲ್ಲಿ ಅಕ್ಕನ ವರಚಿತ್ರವು ಹೃದಯಂಗಮವಾಗಿ ಪ್ರಕಾಶಿಸುವದು. ಕವಿಗಳು ಚರ್ಮಚಕ್ಷುವಿರ ಹಿತರಾಗಿದ್ದರೂ ಶ್ರೀಷ್ಠತಮವಾದ ಜ್ಞಾನಚಕ್ಷುವಿನಿಂದ ಬೆಳಗುತ್ತಿರುವರೆಂಬುದು ಇವರ ಪುರಾಣವನ್ನು ಓದುವವರಿಗೆ ಅವಶ್ಯವಾಗಿ ಬೋಧೆಯಾಗುವದೆಂದು ಭಾವಿಸುವೆನು. ಈವರ ಈ ಪವಿತ್ರ ತಮವಾದ ಪುರಾಣದ ಪ್ರಚಾರಕಾರ್ಯಕ್ಕೆ ಕನ್ನಡನಾಡಿನ ತುಂಬಾಪ್ರೋತ್ಸಾಹವು ದೊರೆಯದಿರಲಾರದೆಂದು ನಂಬಿರುವೆನು.

| | |
|---|---|
| ಬಳ್ಳಾರಿ | ಪಂ. ವೈ. ನಾಗೇಶಶಾಸ್ತ್ರಿಗಳು |
| ೨೮—೧೦—೪೬ | ಬಳ್ಳಾರಿ |

# ವಿಷಯಾನುಕ್ರಮಣಿಕೆ

॥ ಶ್ರೀ ಗುರುಸಿದ್ಧಲಿಂಗಾಯ ನಮಃ ॥

ಸಂಗೀತ ಸಾಹಿತ್ಯ ವಿಶಾರದ ಪುಟ್ಟರಾಜ ಕವಿ ಕೃತ

# ಶ್ರೀ ಅಕ್ಕಮಹಾದೇವೀ ಪುರಾಣಂ

( ವಾರ್ಧಕ ಷಟ್ಪದಿ )

## ಪೀಠಿಕಾ ಸಂಧಿ

## ಗುರು ಸ್ತೋತ್ರ

ಶ್ರೀ ಗುರು ಪರಾತ್ಪರ ನಿರಂಜನ ನಿರಾಕಾರ
ಯೋಗಿಹೃನ್ನಿಲಯಸ್ಥ ಚಿಜ್ಜ್ಯೋತಿರಾಕಾರ
ಯಾಗಾದ್ಯನಿರ್ಗಮ್ಯ ಚಿತ್ಕ್ರಿಯಾ ನಿರ್ಗಮ್ಯ ಪರಮವೈರಾಗ್ಯಸಾರ ॥
ಆಗಮಾಭೇದ್ಯ ಸದ್ಭಕ್ತಿಪರ ಹೃದ್ಯತರ
ಭೋಗ-ಮೋಕ್ಷಾಧಾರ ಭಕ್ತಸಾಕಾರ ಚಿರ
ರಾಗದಿಂ ಭಕ್ತಿವೈಭವವಿತ್ತು ಪೊರೆ ನಮಿಪೆನಲ್ಲಮಪ್ರಭುವಿಭುವರ ॥ ೧ ॥

ವೀರಶೈವ ಪ್ರವರ ನಿರ್ಣಯ ಸದವತಾರ
ಭೂರಿ ದುರ್ಮತತತ್ತ್ವವೃಕ್ಷಮೂಲಕುಠಾರ
ವೀರ ಭಕ್ತ್ಯಂಗನಾಮಂಗಲ ಮಹಾಧಾರ ಸಮತಾದಿ ಸತ್ವಸಾರ ॥
ಕ್ರೂರ ಸೂತಕ ಪಾತಕ ಪ್ರಳಯ ರುದ್ರವರ
ಧೀರ ಚಿರಷಟ್ಸ್ಥಲಾಚಾರ ವೈಭವ ಶಿಖರ
ಶೂರ ಸಮಯಾಚಾರ್ಯ ಬಸವಾರ್ಯ ಮತ್ಕೃತಿಗೆ ಮಂಗಲವನಿತ್ತು
ಸಲಹೈ ॥ ೩ ॥

ಕಕ್ಕಯ್ಯ ಶಿವಶರಣನಮಲ ಪ್ರಸಾದವಿಡಿ-
ದಕ್ಕನಾಗಲೆಯ ವರಗರ್ಭದಿಂದವತರಿಸಿ
ಮಿಕ್ಕ ಷಟ್ಸ್ಥಲಚಕ್ರವರ್ತಿಯೆಂದೆನಿಸಿ ವರಸಿದ್ಧರಾಮಾದಿಗಳಿಗೆ ॥
ಅಕ್ಕರದೆ ಲಿಂಗಧಾರಣಮಂ ಮುದಂಬೆತ್ತು
ಚೊಕ್ಕಟದೆ ಗೈಯುತಾಚಾರ್ಯಪದದೊಳು ಮೆರೆದ
ಚಿಕ್ಕದಂಡಾಧೀಶ ಚೆನ್ನಬಸವೇಶನೀ ಮತ್ಕೃತಿಗೆ ಸೊಗವೀಯಲಿ ॥ ೩ ॥

ಶರಣ ಸಮ್ಯಗ್‌ಜ್ಞಾನ ಸುಖವನಾಸ್ವಾದಿಸಲು
ಹರಸತಿಯೆ ಧರೆಗಿಳಿದು ಬಂದಿರುವಳೆಂಬಿನಂ
ಮೆರೆದಾಮಹಾದೇವಿಯಕ್ಕನೀ ತನ್ನಸಮುವಹ ಪುರಾಣವ ರಚಿಸಲು
ಚಿರಮಂಥನಾದೆನಗೆ ಜ್ಞಾನನೇತ್ರವನಿತ್ತು
ಪೊರೆಯಲೆಂದಾನು ಬಲವೊಂದು ಬೇಡುವೆನವಳ
ಪರಮದಯೆ ಮೃದುಹೃದಯೆ ಜಿತಮಾಯೆ ಚಿತ್ಕಾಯೆ ಕರ್ಮಜಯೆ
ಲಿಂಗಜಾಯೆ ॥ ೪ ॥

ಭಕ್ತಿಯೇ ಶಕ್ತಿಯೈ ಶಕ್ತಿಯುತ ಚೇತನವೆ
ವ್ಯಕ್ತಿಗತವಾದಾತ್ಮಮಾತ್ಮವೇ ಲಿಂಗಮಾ-
ಪ್ರೋಕ್ತ ಸಲ್ಲಿಂಗವೇ ಭಾವಸತ್ಪ್ರಾಣೇಷ್ಟನಾಮದಿಂ ಮೂದೆರನದು ॥
ಭಕ್ತ ಸದ್ಭಾವ ಹೃತ್ಕರಗತಂ ತಾನಾಗಿ
ವ್ಯಕ್ತವಿದು ಮಹದಾದಿಯಾಚಾರ ಕೊನೆಯಾಗಿ
ಶಕ್ತಘನಲಿಂಗವೇ ಮೂರಾಗಿ ವಿಶ್ವಮಂ ತುಂಬಿಹುದು ಪೊರೆಯಲೆನ್ನ ॥ ೫ ॥

ನಿಜಮತದೊಳಿದ್ದು ಸದ್ಭಕ್ತರಿಗೆ ಬೋಧಿಸುತೆ
ನಿಜತತ್ವಮಂ ಲಿಂಗಪೂಜಾನುಭವಿಯಾಗಿ
ಭಜಕಹಿತಕರಮಾದ ಸ್ವಯಜಂಗಮತ್ವಮಂ ತಳೆದು ಚರಜಂಗಮತೆಯ ॥
ವಿಜಿತಾಶೆಯಿಂ ತಳೆದು ಚರಿಸಿ ಭಕ್ತಿಯ ಬಳೆಸಿ
ವೃಜಿನಸುಕೃತವ ಮೀರಿ ಕುಗುಣಸುಗುಣವ ತೂರಿ
ಸುಜನನುತಪರಚರತ್ವವ ಧರಿಸಿ ಮೆರೆದಥಣಿಯಸಮಯೋಗಿಯನೊಲಿಪೆನು ॥ ೬ ॥

ಆ ವೀರಶೈವ ಜೀರ್ಣೋದ್ಧಾರಕಾಗಿ ಸತ್-
ಪಾವನ ಮಹಾಸಭೆಯು ಸ್ಥಾಪಿಸುತೆ ತದ್ಬಲದೆ
ಭೂವಿನುತ ಶಿವಯೋಗಮಂದಿರಾಹ್ವಯ ಯೋಗಸಂಸ್ಥೆಯನು ನಿರ್ಮಿಸಿ ಸದಾ ॥
ಸ್ವಾವಲಂಬನವಿಡಿದು ಧರ್ಮಾವನಂಗೆಯ್ವ
ದೇವನುತಶಿವಯೋಗಿವೃಂದಮಂ ನಿರ್ಮಿಸುತ-
ಲೋವಿದ ವಿರಾಟಪುರದಾ ಕುಮಾರೇಶನಂ ಮತ್ಪರಮಗುರುವನೊಲಿಪೆ ॥ ೭ ॥

ಈತನಿಂ ಸುಜ್ಞಾನನೇತ್ರಮಂ ಪಡೆದು ಮ-
ತ್ತೀತನ ಕೃಪಾಬಲದೊಳುಭಯಸಂಗೀತವಿ-
ಖ್ಯಾತವಿದ್ಯೆಯ ಕಲಿತು ಬ್ರಹ್ಮಚರ್ಯವ್ರತದ ಶಿವಯೋಗಿಯೆಂದೆನಿಸುತ ॥
ಪ್ರೀತಿಯಿಂ ವಿದ್ಯಾರ್ಥಿಗಳಿಗನ್ನವಸ್ತ್ರವನು
ಪೂತವಿದ್ಯೆಯನುಚಿತವಾಗಿತ್ತು ಪಾಲಿಸುತ-
ನಾಥರಕ್ಷಕನೆಂದು ಜಸವಾಂತ ಪಂಚಾಕ್ಷರಾರ್ಯನಿರ್ಕೆನ್ನಮನದೆ ॥ ೮ ॥

ಇವನಕರುಣಾಛತ್ರದೊಳಗಿರ್ದುಭಯಗಾನ
ವಿವಿಧವಾದನಕಲೆಯ ಗೀರ್ವಾಣಕರ್ನಾಟ
ನವರಾಷ್ಟ್ರಭಾಷಾದಿ ಸಾಹಿತ್ಯಮಂ ಕಲಿತು ಧರ್ಮಬೋಧೆಯ ಪಡೆಯುತ ॥
ಭವಬಾಧೆಗುರೆನೊಂದು ಬರೆದಿರುವೆನೀ ಪುರಾ-
ಣವ ನಾನು ಪುಟ್ಟಕವಿಯೆನಗೇಕೆ ಕೀರ್ತಿರತಿ-
ಯವಿನೀತನಂಧನಾನೆನಗೇಕೆ ವಿಖ್ಯಾತಿ ಗುರುವರನ ಕೃಪೆಯೊಂದಿರೆ ॥ ೯ ॥

ಯೋಗಿಸುತೆ ಮನಕೆ ಪಂಚಾಚಾರ್ಯವರ್ಯರಂ
ಶ್ಲಾಘಿಸುತೆ ಹರಿಹರಪ್ರಮುಖಕವಿಸೂರ್ಯರಂ
ಸ್ವಾಗತಿಸಿ ಸದ್ಭಕ್ತ ಮಾಹೇಶ್ವರಾರ್ಯರಂ ಬಲವೊಂದು ಶರಣತತಿಗೆ ॥
ಬಾಗುತಂ ನಮಿಸುತ್ತೆ ಸುಸಮಾಜಧುರ್ಯರಂ
ರಾಗಿಸುತೆ ತಲೆಬಾಗಿ ದೇಶಹಿತಕಾರ್ಯರಂ
ಲೋಗಿಸುತೆ ಸದ್ಯೋಗಿಸಮತೀತತುರ್ಯರಂ ನೆನೆಯುತೀಕೃತಿವೇಳ್ವೆನು ॥ ೧೦ ॥

ಅಕ್ಕನೀಚರಿತದಿಂದೆಮ್ಮಾತ್ಮಕಥೆಯರಿವು
ಸೊಕ್ಕಿ ಸತ್ತವರ ಕಥೆಯಾಕರಣದಿನದಿಲ್ಲ
ಮಕ್ಕರತೆಯುಂಗವೇ ಮಾದೇವಿ, ಲಿಂಗವೇ ಪತಿ ಮಲ್ಲಿಕಾರ್ಜುನೇಶ ॥
ಮಿಕ್ಕಿರುವ ದುಷ್ಕಾಮವೇ ಕೌಶಿಕಂ ಮತ್ತೆ
ನಿಷ್ಕಾಮವೇ ತ್ಯಾಗ ಸತ್ಕಾಮನುಡುತಡೆಯು
ತಕ್ಕ ಚಿತ್ಕ್ರಿಯೆಯದೇ ಕಲ್ಯಾಣಮಂಟಪವು ಚಿತ್ಕಳೆಯೆ
ಪ್ರಭುರಾಯನು ॥ ೧೧ ॥

ಶ್ರೀಶೈಲಕದಳಿಬನಮಾ ಬ್ರಹ್ಮ ಚಕ್ರಮಿಹು-
ದೀ ಸಮಸ್ತವನರಿಯಲೀ ಪುರಾಣವ ಬರೆವೆ-
ನೀಶಭಕ್ತರ್ಕಳಿದನೋದುವದು ತಿರ್ದುವದು ಕೇಳಿ ಸಂತಸವಡೆವುದೆ ॥
ಲೇಸಿನಿತು ದೊರೆಯದೀ ಕೃತಿಯಲ್ಲಿ ಪುರಡಿಸರಿ-
ಗಾಸುಗುಣಿಗಳಿಗಿಲ್ಲಿ ಯೆಲ್ಲ ವೈಭವಮುಂಟ-
ದೇಸುದಿನಮಿರ್ದಡೇಂ ರತ್ನಮೊದಗುವದೆ ಜಲಜಂತುವಿಗೆ ಸಾಗರದೊಳು ॥ ೧೨ ॥

ರಮಣಿಯೋಲ್ ರಸಭಾವಸದಲಂಕೃತಿಪ್ರಯುತ-
ಮಮಲವನದಂತೆ ಕವಿರಾಜಯತಿಮಾನಿತಂ
ಸುಮದಂತೆ ಷಟ್ಪದೀಪ್ರಚಯವೃತ್ತಿಸ್ಥಿತಂ ಮಂತ್ರದೋಲ್ ಛಂದೋನ್ವಿತಂ ॥
ಅಮರೇಂದ್ರಸಭೆಯಂತೆ ಗುರುಬುಧಾಶ್ರಯಪದಂ
ಸುಮನುಷ್ಯನಂತೆ ಶುಭರೀತಿಗುಣಮಂಡಿತಂ
ಕಮಲಾಪ್ತನಂತೆ ದೂರಾಪಾಸ್ತದೋಷಮುಂ ಶಿವನಂತೆ ಸದ್ಗುಣಯುತಂ ॥ ೧೩ ॥

ಶುದ್ಧಹೃದಯಕ್ಷೀರವಾರಾಶಿಜನಿತಪ್ರ-
ಸಿದ್ಧ ಕೃತಿರತ್ನಮಂ ಬುದ್ಧಿಶಾಣದೊಳಿಟ್ಟು
ಶ್ರದ್ಧೆಯೆಂಬುವ ಸೂತ್ರವನು ಮಹಾಗುರುಕೃಪಾಸೂಚಿ
ಯೊಳ್ ಪೋಣಿಸುತಲಾ ॥
ಸಿದ್ಧಲಿಂಗನ ಚರಣಕರ್ಪಿಸೆನು ಯಡೆಯೂರ
ವೃದ್ಧ ತೋಂಟದ ಯತಿಯು ಕಂಠದೊಳು ಧರಿಸುತಿದ-
ನುದ್ಧರಿಸಲೆಂದಾನು ನಮಿಸಿ ಯಾಚಿಸುವೆನಾ ಪ್ರಭುರಾಯನವತಾರನ ॥ ೧೪ ॥

ಇದು ಮಹಾದೇವಿಯಕ್ಕನ ಚರಿತಮಿದಕವಳೆ
ವಿದಿತನಾಯಿಕೆಯಹಳು ಸದ್ಭಕ್ತರಿದನೋದ-
ಲಧಿಕಾರಿಗಳು ದೈವಮಲ್ಲಮಪ್ರಭುರಾಯನಾ ಶಿವನ ಚೈತನ್ಯನು ॥
ಹೃದಯಪೂರ್ವಕಮೋದುತಾಲಿಸಲಿರ್ಗೀಯಿಳೆಯೊ-
ಳೊದಗುವದು ಭೋಗಮೋಕ್ಷೈಶ್ವರ್ಯಸಿದ್ಧಿಚಯ-
ವಿದರ ಪಾರಾಯಣದೆ ಮೋಕ್ಷಮಹುದೆಲ್ಲಕ್ಕು ಭಕ್ತಿಯೇ ಬೀಜಮರಿಯೆ ॥ ೧೫ ॥

**ಅಂತು ಪೀಠಿಕಾ ಸಂಧಿ ಒಂದಕ್ಕಂ ಪದಗಳು ೧೫ ಕ್ಕಂ ಮಂಗಲಂ**

॥ ಶ್ರೀಗುರು ಸಿದ್ಧಲಿಂಗಾಯ ನಮಃ ॥

## ೨ ನೇ ಸಂಧಿ

**ಸೂಚನೆ**

ಭಕ್ತಿಸುಜ್ಞಾನವೈರಾಗ್ಯಗಳು ಧರೆಯೊಳಗೆ
ವ್ಯಕ್ತಿಯೊಂದಾಗಿಳಿದು ಬಂದವೋಯೆಂಬಂತೆ
ಭಕ್ತರಾಗಿಹಸುಮತಿನಿರ್ಮಲರೊಳುದಿಸಿದಳು ಘನಮಹಾದೇವಿಯಕ್ಕ ॥ ಪ ॥

ನಿರುತ ವಾಚಕಜಪದೆ ತೊಡಗಿದಜಗಣ್ಣನೆಂ-
ಬುರುಶರಣನಿಗೆ ಮನೋಜಪವನರುಹಲ್ಕೆಂದು
ಹರನ ಪ್ರೇರಣೆಯಿಂದ ಫಣಿಮಣಿಯದೃಷ್ಟವನುಕಂಡು ಸುಮನೋಜಪದೊಳು ॥
ಬೆರೆದು ತಾನೈಕ್ಯನಾಗಲ್ಕೆ ತನ್ನಿಜಸಹೋ-
ದರಿಯಪ್ಪ ಮುಕ್ತಾಯಿ ನೋಡಿ ಶೋಕಿಸುತಿರಲು
ಕರುಣೆಯಿಂ ಬಂದು ಚಿದ್ಬೋಧವನು ಗೈದು ಪೊರೆದಾ ಪ್ರಭುವು ಸಲಹೆಲೆನ್ನ॥ ೧ ॥

ನಿರವಧಿಮದುದಕ ಭ್ರಮದಗಣಿತಕಲ್ಲೋಲ
ಚರದಧಿಕ ಡಿಂಡೀರ ಫೇನ ಬುದ್ಬುದ ಮೂಲ
ನಿರತಿಶಯ ತಿಮಿತಿಮಿಂಗಲ ಮಕರ ಕೂರ್ಮ ಗಜಘೇಕ ಮಹಿಷಾದಿಶಾಲೀ ||
ಪರಮ ಪ್ರವಾಲ ಮಣಿ ಶುಕ್ತಿ ಮೌಕ್ತಿಕ ಜಾಲ
ಗಿರಿಕುಲ ಪ್ರಬಲ ಘನಸಂದೋಹ ಸುವಿಶಾಲ
ಗರಸುಧಾ ಲವಣರಸ ಶಂಖ ಸಿಕತಾ ಮುಖ್ಯ ವಿಭವಾಗರಂ ಸಾಗರಂ || ೨ ||

ಅತಿ ಹಿಮದ ಸಾರದಿಂ ನೀರದಿಂ ಕ್ಷೀರದಿಂ
ವ್ರತತಿ ತರುಜಾಲದಿಂ ಮೂಲದಿಂ ಶೈಲದಿಂ
ಕ್ಷಿತಲೋಹ ಖನಿಗಳಿಂ ಮುನಿಗಳಿಂ ಧನಿಗಳಿಂ ಮನೆಗಳಿಂ ಮಣಿಗಳಿಂದ ||
ಶ್ರಿತಬಹು ಕ್ಷೇತ್ರದಿಂ ಪಾತ್ರದಿಂ ಹೋತ್ರದಿಂ
ಶ್ರಿತಜನದ ಸೀಮದಿಂ ಕಾಮದಿಂ ಹೇಮದಿಂ
ವಿತತಮಾಗಿಸೆವುದಾ ಗಹನಾಬ್ಧಿಯುತ್ತರಕೆ ಹಿಮಗಿರಿಯು ಸಿರಿಯ ಧರೆಯು || ೩ ||

ಪೂತಗೌರೀಶಂಕರಾಖ್ಯಾತವಿದರತುಡಿ-
ಗೋತು ಬಂದಿಹುದಿಲ್ಲಿ ಪಾರ್ವತೀಪರಮೇಶ್ವ-
ರಾತತಾಸ್ಥಾನವಿಹುದೆಂದು ಪೌರಾಣೇತಿಹಾಸದೋಳ್ ಖ್ಯಾತಿಯುಂಟು ||
ಪ್ರೀತಿ ವೈರಗಳಿಲ್ಲ ಶೋಕ ಮೋಹಗಳಿಲ್ಲ
ಭೀತಿ ದುರಿತಗಳಿಲ್ಲ ಕೋಪತಾಪಗಳಿಲ್ಲ
ನೀತಿಯೋಳ್ಮೇಲಾಗಿ ಮಾತಿಗಂ ನಿಲುಕದಾದೀಶಿಖರ ಭೂಮಿಯೊಳಗೆ || ೪ ||

ಈ ಶಿಖರ ಮಧ್ಯದೊಳು ಶೋಭಿಪುದು ಕಿನ್ನರಸು-
ರಾಸುರನರೋರಗಪಗಂಧರ್ವಸಂಶ್ರಿತಂ
ವಾಸವಾನಲವರುಣವಾಯುಯಮನಿರುತಿರುದ್ರಸಖೇಶದಿಕ್ಪತಿಯುತಂ ||
ಕೇಶವಬ್ರಹ್ಮರುದ್ರಪ್ರತತಿಮಂಡಿತಂ
ಶ್ರೀ ಶಾರದಾ ಶಚೀ ಪ್ರಮುಖ ದೇವೀಯುತಂ
ಶ್ರೀ ಸನಕಸಾನಂದ ಮುನಿಮುಖ್ಯ ನಂದಿ ಭೃಂಗಿಪ್ರಭೃತಿಗಣಪಾಲಿತಂ || ೫ ||

ಕೈಲಾಸ ಸದನಮಿದುಮಿದರ ಮಧ್ಯದೆ ಪ್ರಣವ
ಮೂಲೋತ್ಥ ಪೀಠದೊಳು ಶಿವನಾಗಳುರುಲಿಂಗ
ಲೀಲಾತ್ಮನಾಗಿರಲು ಶಕ್ತಿಯುನ್ಮೇಷವಾಗಲ್ಕೆ ಸಾಕಾರನಾಗಿ ॥
ಕೇಳುತ್ತೆ ನಿಜಗುಣ ಸ್ತೋತ್ರವನು ನೋಡುತ್ತೆ
ಕಾಲಾರಿ ಭೃಂಗೀಶ ನಾಟ್ಯವನು ಮಾಡುತ್ತೆ
ಫಾಲಾಕ್ಷನುಮೆಯೊಡನೆ ಬಿನದವನು ಗಣಪತಿಪ್ರಭೃತಿ
ಸುತಸುಖದೊಳಿಹನು ॥ ೬ ॥

ಗಿರಿಜೆ ಗೀರ್ವಾಣ ಗೀತ ತ್ರಿಗುಣೆ ಸಂಪೂಜ್ಯೆ
ವರಗೌರಿ ಘನಗೌರವಾಕಾರೆ ಮುದಪಾರೆ
ಪರಮ ಮಂತ್ರಾಂಗಿ ಮಾಯಾಕಾಲಕರ್ಮಾಂಗಿ ಚಿದಪಾಂಗಿ ತಾತ್ವಿಕಾಂಗಿ ॥
ಪರತರೌಂಕಾರ ರೂಪಿಣಿ ಸದಸದಾಧಾರೆ
ನಿರುತ ನಿರ್ಮಲ ನಿರಾಕಾರಾತ್ಮಸಂಶ್ರಯಿಣಿ
ಹರನಸಮವಾಮಭಾಗವನಲಂಕರಿಸಿಂತು ನುಡಿದಳು ಕ್ರಿಯಾರೂಪಿಣೀ ॥ ೭ ॥

ದೇವ ಕೇಳೆನಗೊಂದು ಸಂದೇಹಮಿರುವದೀ-
ಭೂವಲಯದೊಳಗೆನ್ನ ಮಾಯೆಯನು ಗೆಲುವಮಹಿ-
ಮಾವತಂಸನದಾವನಿಗಿಹನು ಪೇಳೆನಲು ಕೇಳುತೀಶ್ವರನೊರೆದನು ॥
ದೇವಿಯರಿ ಮಮ ನಿರಂಜನ ಕಳಾತ್ಮಕನಾಗಿ
ಭಾವಿಸಲ್ ಸುಜ್ಞಾನಿ ಪರಮ ನಿರಹಂಕಾರ
ಪಾವನಾತ್ಮಜನಾಗುತಲ್ಲಮಪ್ರಭುವೆಂದು ಪೆಸರಾದ ಚರನಿರುವನು ॥ ೮ ॥

ನಾನು ಮಾಯೋಪೇತನವನು ಮಾಯಾತೀತ
ನಾನು ತ್ರಿಗುಣೋಪೇತನವನು ತ್ರಿಗುಣಾತೀತ
ನಾನು ಸಕಲೋಪೇತನವನು ಸಕಲಾತೀತನರಿಯಲಾಗದ ಮಹಿಮನು ॥
ನಾನು ಭಾವೋಪೇತನವನು ಭಾವಾತೀತ
ನಾನು ಲೋಕೋಪೇತನವನು ಲೋಕಾತೀತ
ನಾನು ದ್ವಂದ್ವೋಪೇತನವನು ದ್ವಂದ್ವಾತೀತನೆನಿಸಿ ಮೆರೆವನು ಜಗದೊಳು ॥ ೯ ॥

ಎನಲು ಶಿವನುಮೆ ಕೇಳಿ ನಸುಮುನಿಸಿನಿಂ ನುಡಿದ
ಳನುಪಮನೆ ನೀನೆತ್ತಲಾ ಜೋಗಿಯೆತ್ತಲವ-
ನನವರತ ನಿನ್ನ ಪೂಜಿಸಿ ಜಗವು ಮೆರೆಯುವದು ನಿನಗಿಂತಲಧಿಕರಾರು ॥
ಮನುಮುನಿಮಹಾಯೋಗಿಸಿದ್ಧರಾರೂಢರಾ
ಘನಭಕ್ತಿಯಿಂದೆ ಸಮತೀತರಾಗಿರ್ಪರೀ
ತನದೆಂತು ಮಾಯೆಯನು ಮೀರಿಹನೋ ನೋಡುವೆನು ಜಯಿಸಲೆನ್ನಯ
ಮಾಯೆಯ ॥ ೧೦ ॥

ನಗುತಭವನೊರೆದನೆಲೆ ಗಿರಿಜೆ ಯೀನುಡಿ ಬೇಡ
ಮಿಗೆ ವಿಚಾರಿಸು ನಿನಗದಾವುದರಿಯದಲಿಹುದು
ಬಗೆಯೆ ಕೂಟಸ್ಥಾತ್ಮರೂಪಗೆಲ್ಲಿಯ ಮಾಯೆ ? ಗೆಲ್ಲುವದು ನೀನದೇನು ? ॥
ಸೊಗಕೆ ಸೊಗವಾತನಿಹನೋಜಕವನೋಜವಾ-
ಬಗೆಗಾತನೇ ಬಗೆಯು ಶಬ್ದಕಾತನೆ ಶಬ್ದ-
ಮೊಗರು ತಕ್ಕುದಿದಲ್ಲ ಭಕ್ತಿಶಕ್ತಿಗಳೆಲ್ಲ ವಾತನಿಂದೊಗೆದಿಹವು ಕೇಳ್ ॥ ೧೧ ॥

ನಾನು ಪರಕಿಸದೆಂತು ನಂಬುವದು ಪೇಳಭವ
ನೀನಿರುವೆ ಶಂಭು ನಿನಗೆಲ್ಲಮುಂ ನಂಬುಗೆಯ-
ದಾನು ನಿನ್ನಯ ಶಕ್ತಿ ಪರಕಿಸುವದೇ ಹಿತವು ಕರುಣಿಸೈ ದೇವದೇವ ॥
ಜ್ಞಾನಹರತಾಮಸಿಕಮಾಯೆಯನು ಕಳುಹುವೆನು
ನೂನವಿದು ಷತ್ತ್ರೀಜದವನತಿಯ ಗೈಯುವೆನ-
ಧೀನವೀಜಗವೆನಗೆ ತ್ವಚ್ಚರನದೆಂತು ವಶನಾಗನೋ ನೋಡುತಿಹೆನು ॥ ೧೨ ॥

ಎಂದು ಶಿವನಪ್ಪಣೆಯ ಮನ್ನಿಸದೆ ಮಾದೇವಿ
ಮುಂದ ತಾಮಸ ಮಾಯೆಯನು ರೂಪಗೊಳಿಸುತ್ತೆ
ಮುಂದಪ್ಪ ಕಾರ್ಯಪನು ಮನದೊಳಾಲೋಚಿಸದಲಿಂತಾಜ್ಞೆಯನು ಗೈದಳು ॥
ಕಂದನೆಯೆ ಕೇಳ್ ಭೂಮಿಯೊಳಗೋರ್ವನತಿಬಿಂಕ-
ದಿಂದಲಲ್ಲಮನೆನಿಪ್ಪಿಂದ್ರಜಾಲಿಗನೆಮ್ಮ
ದಂದುಗದ ಮಾಯೆಯನು ಗೆಲುವ ಸಾಹಸಿಯೆನಿಸಿ ಮೆರೆವನಂತೀಗಲವನು ॥ ೧೩ ॥

ಸನ್ನುತಾಂಗಿಯೆ ಯೆಮ್ಮ ಜಸವ ಕಾಯುವ ಬಲವು
ನಿನ್ನೊಳಲ್ಲದೆ ಮತ್ತದಾರೊಳಗುವಿಲ್ಲಪರಿ
ಮನ್ನಿಸುತ್ತೆಮ್ಮಾಜ್ಞೆಯನುಪೋಗಿ ಭುವನನೊಳು ಬನವಾಸಿಯರಸಿಯೊಳು ನೀ ||
ಚನ್ನಿಗಳೆ ಸುಂದರಾಕಾರದೊಳು ಜನಿಸುತ್ತೆ
ಮನ್ನಣೆಯ ಕೌಶಲವ ತೋರಿ ಬೆಡಗಂ ಬೀರಿ
ಸನ್ನೆಗೆಡಿಸಿಲ್ಲಿಗೆಳೆತರುವುದಾತನನೆನಲ್ ತಾಮಸಿಯು ನುಡಿದಳಾಗ || ೧೪ ||

ದೇವಿ ನಿಮ್ಮಯ ಕರುಣೆಯೊಂದಿರಲಿ ಸಾಕೆನಗ-
ದಾವನಾಗಲಿ ನಾನು ನಿಮ್ಮೆಡೆಗೆ ಸೆಳೆತರುವೆ
ಕಾವುದಾಶೀರ್ವದಿಸಿಯೆನ್ನುತಾಗಳೆ ನಮಿಸಿ ಪೊರಮಟ್ಟಳಾಗ ಮಾಯೆ ||
ದೇವನುರೆ ಮೌನಮಂ ಧರಿಸಿ ಭವಿತವ್ಯವನು
ಭಾವದಿಂ ಭಾವಿಸುತಲಿರ್ದನಾ ಪರಶಿವೆಯು
ತೀವಿದುತ್ಸಾಹದಿಂ ಹಸಿತಮುಖಿಯಾಗಿರಲು ಸಭೆಯು ನಿಬ್ಬೆರಗಾಯಿತು || ೧೫ ||

ಪೊರಮಡುತೆ ಮಾಯೆಯುರನೋಟದಿಂದಾ ಬ್ರಹ್ಮ-
ಹರಿರುದ್ರರಂ ವಿಕೃತಿಪರವಶರನಾಗಿಸುತೆ
ವರಮುನಿತಪೋಭಂಗವನು ಮೌನಿಜಪಭಂಗವನು ವ್ರತಿಯ ವ್ರತಭಂಗವ ||
ನೆರೆಗೈದು ವಿಷಯಲೋಲುಪ್ತರಂ ಮಾಡುತ್ತೆ
ಸ್ಥಿರಚರಪ್ರಾಣಿಗಳ ಮೋಹವನು ಬಳೆಸುತ್ತೆ
ಸರಸಮೆನೆ ಬೆಡಗುಬಿನ್ನಾಣವೈಯಾರಮಂ ತೋರುತ್ತೆ ಬರುತಿರ್ದಳು || ೧೬ ||

ದೇವಾತಾಲಯದಲ್ಲಿ ಮಠಸುಮಂದಿರದಲ್ಲಿ
ಪಾವನಾಶ್ರಮದಲ್ಲಿ ಕ್ಷೇತ್ರತೀರ್ಥಗಳಲ್ಲಿ
ದೇವಕಾರ್ಯಗಳಲ್ಲಿ ವೇಶ್ಯೆಯರ ಸಿಂಗರದ ನರ್ತನವು ಸಾಂಗವಾಯ್ತು ||
ಈ ವಿಕಾರದಸಹ್ಯ ದುಷ್ಟವೃತ್ತಿಯದಿಂತು
ಭಾವಿಕರಭಾವಿಕರ ಸಜ್ಜನರಸಜ್ಜನರ
ಕೋಪಿದರಕೋವಿದರನೇಕಗೈದಳು ಮಾಯೆ ವೇಳಲೇನದ್ಭುತವನು || ೧೭ ||

ಉರುಸತ್ಯಲೋಕದೊಳ್ ಸುಸರಸ್ವತೀಯುತಂ
ಹರಿಯ ವೈಕುಂಠದೊಳ್ ನಿರುತಲಕ್ಷ್ಮ್ಯಾಲಯಂ
ಹರನ ಕೈಲಾಸದೊಳ್ ಧನಪತಿಗೃಹಾಸ್ಪದಂ ಸುರಲೋಕದೊಳ್ ಸುರಭಿಗಂ ॥
ವರಧರಾಲೋಕದೊಳ್ ವಿವಿಧ ಜೀವಾತ್ಮಕಂ
ಚಿರನಾಗಲೋಕದೊಳ್ ಸದನಂತಪಾಲಿತಂ
ಪರಧರ್ಮಲೋಕದೊಳ್ ಶಿಕ್ಷಾಧಿಕಾರಕಂ ಭರತಖಂಡಂ ಮೆರೆವುದು ॥ ೧೮ ॥

ಇಂತೆಸೆವ ಭಾರತವನೀಕ್ಷಿಸುತೆ ಮಾಯೆ ತ-
ನ್ನಂತವಿಲ್ಲದ ಪ್ರಕೃತಿಯಣುವೆಂದು ಭಾವಿಸುತ-
ಲಂತು ನಿಜವೈಖರಿಯ ಪಸರಿಸುತೆ ಬಂದಳೀ ಕರಿನಾಡಿಗೆ ॥
ಶಾಂತಿವರ ದೇವತಾಸ್ಥಾನವೆಂದೆನಿಸುತ್ತೆ
ಭ್ರಾಂತಿಹರ ಸದ್ಧರ್ಮಸದನವೆಂದೆನಿಸುತ್ತೆ
ಕ್ರಾಂತಿಕರ ಸುಜ್ಞಾನವಿಜ್ಞಾನನಿಲಯವೆಂದೆನಿಸುತ್ತೆ ಮೆರೆದಿಹುದಿದು ॥ ೧೯ ॥

ಕಾಲಕಾಲಕೆ ದೊರೆವ ಸದ್ವೃಷ್ಟಿಮೌಕ್ತಿಕಂ
ಮೇಲೆ ಮೇಲೊದಗುವಾಹಾರ ಫಲರತ್ನಕಂ
ಸಾಲು ಸಾಲಾಗಿರುವ ಸುಕ್ಷೇತ್ರಹೇಮಕಂ ಸದ್ಬೀಜ ವೈಢೂರ್ಯಕಂ ॥
ಮೂಲೆಮೂಲೆಯೊಳಿರ್ಪ ಕೃಷಿಕೋಪಕರಣಕಂ
ಮೇಳವೇಳವಿಸಿರ್ಪ ಬಿದಿಸ್ವರ್ಣಕಾರಕಂ
ಬಾಲಬಾಲೆಯುರರಿಯೆ ಗೈದು ಭಾರತಿಗಿತ್ತ ಮೂಗುತಿಯೊ ಯೆನಲೆಸೆದುದು ॥ ೨೦ ॥

ಕನ್ನಡಿಗರೀಭೂಮಿ ಚೆನ್ನರನ್ನದ ಸೀಮೆ
ತನ್ನ ಜನನದ ಭೂಮಿಯನ್ನಧಾನ್ಯದ ಸೀಮೆ
ಯನ್ನುತ್ತೆ ಮನ್ನಿಸುತೆ ಕುಣಿಯುತ್ತೆ ತಣಿಯುತ್ತೆ ದಕ್ಷಿಣಕೆ ನೋಡಿ ಭಾಮೆ ॥
ಮನ್ನಣೆಯ ಚಿರಭೂಮಿ ಮಾನ್ಯೆಯುಸಿರಿದ ಸೀಮೆ
ಬನ್ನವಿಲ್ಲದಭೂಮಿ ಧನ್ಯರಾಜರ ಸೀಮೆ
ಯಿನ್ನೆಂದು ಸಿಗದೆನಗೆ ಬನವಾಸಿ ಪುರಭೂಮಿಯೆಂದೈದಿಹಳು ವಾಮೆ ॥ ೨೧ ॥

ವನದಿಂದೆ ವಿವಿಧತರುಗಣದಿಂದೆ ಶೃಂಗಾರ-
ವನದಿಂದೆ ಸುನದೀವಹನದಿಂದೆ ಕಲಮುಚ್ಚ-
ವನದಿಂದಲಿಕ್ಷುಭೂವನದಿಂದೆ ಸರಸೀಗಹನದಿಂದೆ ಸುಮನದಿಂದೆ ||
ವನದಿಂದೆ ದೇವಾಯತನದಿಂದೆ ಸುಂದರಭ-
ವನದಿಂದೆ ಕುಶಲಸಜ್ಜನದಿಂದೆ ಮಿತಸತ್ವ-
ವನದಿಂದೆ ಸ್ತ್ರೀಪುತ್ರಧನದಿಂದೆ ಗುಣದಿಂದೆ ಬನವಾಸಿ ಚಲ್ವಾಯಿತು || ೨೨ ||

ಅಲ್ಲಿಮಮಕಾರನೆಂಬುವ ನೃಪನು ವಾಸಿಸುತ-
ಮುಲ್ಲಸದೆ ತದ್ಭುವನ ಭಾಗಮಂ ಶಾಸಿಸುತೆ
ಸಲ್ಲಲಿತ ವೈಭವದೆ ಪ್ರಜೆಗಳಂ ಪೋಷಿಸುತ ಸ್ವರ್ಗಸುಖದೊಳಗಿರ್ದನು ||
ವಲ್ಲಭೆಯು ಮೋಹಿನೀನಾಮಕಳುಮಿನೃಪತಿ
ಗೆಲ್ಲತೆರದಿಂದಲತಿಸಮಳೆನಿಸಿ ಬಾಳಿಹಳು
ಸಲ್ಲುವಂತಿಹಳು ಸಂಪದಕೇನು ಚ್ಯುತಿಯಿಲ್ಲ ಸಂತಾನಮಾತ್ರವಿಲ್ಲ || ೨೩ ||

ಹೊತ್ತಿಗೆಯು ಕೇಳಿಸುತೆ ಯಂತ್ರ ಮಂತ್ರಂಗಳಂ
ಬಿತ್ತರದೆ ಮಾಡಿಸುತೆ ಸಂತತಿಯನಿಚ್ಛಿಸುತೆ
ಸುತ್ತಲಿಹ ದೇವರಿಗೆ ಹರಿಕೆಯನು ಮುಟ್ಟಿಸುತೆ ದಂದುಗವ ಪಡುತಿರಲ್ಕೆ ||
ಅತ್ತಲಿಂ ಬಂದಳಾ ಮಾಯೆ ನೆರೆ ಶೋಧಿಸುತೆ
ಪತ್ತನದೆ ಪೊಕ್ಕರಸಿ ಮೋಹಿನಿಯನಿರುಕಿಸುತೆ
ಚಿತ್ತದೊಳು ಮೋದಿಸುತೆ ದೇವಿಯಂ ಧ್ಯಾನಿಸುತೆ ಗರ್ಭದೊಳು
ಪೊಕ್ಕಳಜಿತೆ || ೨೪ ||

ದಿನದಿನಕೆ ಮಮಕಾರಸಹಧರ್ಮಿಣಿಯು ಗರ್ಭ-
ವನಿತನಿತು ಬಳೆಯುತಿರಲರಸನಿಗೆ ಸನ್ಮೋದ-
ವಿನಿತಿನಿತು ಪೆರ್ಚುತಿರೆ ಗರ್ಭಿಣಿಯ ಚಿನ್ಹಗಳು ತೋರುತಿರೆ ಜನಕೆ ಮುದವು ||
ಮನೆಮನೆಯೊಳುದಿಸುತಿರಲರಸಿಗುರೆ ಬಯಕೆಗಳು
ಜನಿಜನಿಸಿ ಕಾಡಲಾದಪವಿಂತು ಸುಂದರಿಯು
ನೆನೆ ನೆನೆದು ಹೊಂದಲಾದಳದೇನು ಬಣ್ಣಿಪೆನು ಬಯಕೆಗಳ
ಗೊಂದಲವನು || ೨೫ ||

ಸೊಗದೊಳುಣ್ಣುವ ಬಯಕೆ ಸುಖದೆ ನಿದ್ರಿಪ ಬಯಕೆ
ಪಗಡೆಯಾಡುವ ಬಯಕೆ ನಾಟ್ಯದಾಟದ ಬಯಕೆ
ಸೊಗಯಿಸುತೆ ಪತಿಯೊಡನೆ ಬಿನದಿಸುವ ಬಯಕೆ ಪೇರ್ ಜನರೊಡನೆ
ಕೆಲೆವ ಬಯಕೆ ॥
ಭಗವತ್ಕಥಾವಳಿಯನಿರದೆ ಜರೆಯುವ ಬಯಕೆ
ಸುಗುಣಿಗಳ ಕುಗುಣಿಗಳನೊಂದು ತಿಳಿಯುವ ಬಯಕೆ
ಪಗಲಿರುಳು ಸಿಂಗರದ ಕಥೆಯನಾಲಿಪ ಬಯಕೆ ಸತ್ಕಾರ್ಯವಳಿವಬಯಕೆ ॥ ೨೬ ॥

ಇಂತು ನವಮಾಸಗಳು ಪೂರೈಸಲಾಗನಲ-
ವಾಂತು ಕರ್ಮವನೆಲ್ಲ ಮುಗಿಸುತಿರುವಾಗಳೊಲಿ-
ದಿಂತು ಪೆಣ್ಮಗುವನಲಸದಲೆ ಪಡೆದಳು ರಾಣಿ ಶಾಂಕರಿಯು ಸುಮ್ಮದಿಸಲು ॥
ಕಂತುವಿನ ಪತ್ನಿಯೋ ಶಕ್ರನರ್ಧಾಂಗಿಯೋ-
ಯೆಂತು ತಿಳಿಯುವದೆಂದು ಶಿಶುವಿನೋಜವ ನೋಡಿ
ಯಂತರಾಲಯದಲ್ಲಿ ಪರಿಜನರು ವಿಸ್ಮಯದ ಮಾತನಾಡುತಲಿರ್ದರು ॥ ೨೭ ॥

ವರಮುನಿವ್ರಜಮನವು ಬೆಚ್ಚಿಬೆದರಿಹುದಾಗ
ನೆರೆ ಹುತ್ತಬೆಳೆದಿರ್ಪ ತಪ್ಪೇವಮೆಲೆದಿರ್ಪ
ಚಿರತಪೋಧನರೆಲ್ಲ ರತಿವಿಕಾರದೆ ಮುಳುಗಿ ಮುಂಗಾಣದಾಗಿರ್ದರು ॥
ಪರಮದೂರ್ವಾಸನಾವೇಳೆಯೊಳು ಬಂದಲ್ಲಿ
ನೆರೆದಯತಿಗಳಿಗಂದು ಪೇಳಿ ಮಾಯೆಯ ಕಥೆಯ
ಬೆರೆದಲ್ಲಮಪ್ರಭುವ ಭಜಿಸಿರೆಂದುಸುರಿ ತತ್ತಾಪಸನು ಪೆರಸಾರ್ದನು ॥ ೨೮ ॥

ಮಮಕಾರನುತ್ಸಹದಿಂದೆ ದಾನವರ್ನಿಯು-
ತ ಮಿತದೇವರುಗಳಿಗೆ ದಿಪ್ರೋತ್ಸವಂಗೈದು
ನಿಮಿಷಾರ್ಧದೊಳಗಹಂಕಾರನೆಂಬುವ ತನ್ನಕುಲುಗುರುವ ಕರೆಯಿಸಿದನು ॥
ನಮಿಸಿ ಸತ್ಕರಿಸಿ ಕುಳ್ಳಿರಿಸಿ ಮಗುವಂ ತೋರೆ
ಕ್ರಮದೆ ತತ್ಕಥೆಯುಸುರುತಿವಳಪತಿ ಶಿವನೆನುತೆ
ಪ್ರಮುದದಿಂದೊರೆದಾಗಳಾಸುತೆಗೆ ಮಾಯೆಯೆಂದಿಡಿಸಿದನು ನವನಾಮವ ॥ ೨೯ ॥

ನೋಡಿದೊಡೆ ಮೋಹಮಿನಿದನಿಗೇಳೆ ಮೋಹಮು-
ತ್ತಾಡಿದೊಡೆ ಮೋಹಮುರೆ ಮುದ್ದಾಡೆ ಮೋಹಮೊಲೆ-
ಯೂಡುವಡೆ ಮೋಹಮುರೆಪೂಸುವಡೆ ಮೋಹಮಾಭರಣಮಿಡೆ ಮೋಹ
ಮರಿಯೆ ||

ಆಡುವಡೆ ಮೋಹಮುಲಿದಾಡುವಡೆ ಮೋಹಮುರು-
ಳಾಡುವಡೆ ಮೋಹಮುಳುತೋಡುವಡೆ ಮೋಹಮುಳಿ-
ಕಾಡುವಡೆ ಮೋಹಮಣಕಾಡುವಡೆ ಮೋಹವುಸಿರಾಡುವಡೆ ಮೋಹವಿಂತು || ೩೦ ||

ಆ ಮಾಯೆ ಮೋಹಕ್ಕೆ ತಾಯಾಗಿ ಘಳಿಘಳಿಗೆ-
ಗಾಮಾತೆಯಕ್ಕರತೆಯೊಳು ಸೊಗದೆ ಬಳೆಯುತ್ತೆ
ಕೌಮಾರಭೂಮಿಕೆಯೊಳಡಿಯಿಡುತ್ತಿರಲಾಗಳೀಕ್ಷಿಸುತೆ ಪಿತನು ಕರೆದು ||
ನೀ ಮಾಡು ಮಗಳೆ ಮಧುಕೇಶ್ವರನ ಪೂಜೆಯನು
ಕಾಮಾರಿ ನಿನಗೊಲಿದು ಕರುಣಿಪನು ಸತ್ಪತಿಯ
ನೇಮಸ್ಥಳಾಗು ನಾವಸಮರ್ಥರೌ ನಿನಗೆ ಸಮವರನ ಹುಡುಕಲೆಂದಾ || ೩೧ ||

ಸಮ್ಮತಿಸಿ ಪನ್ನೀರಿನಿಂ ಸ್ನಾನಮಂಮಾಡಿ
ಸಮ್ಮುದದೆ ಮಡಿಯುಟ್ಟಲಂಕಾರಗಳನಿಟ್ಟು...
ನೆಮ್ಮಿಪೂಜಿಸಲರ್ಚನೆಯ ವಿವಿಧ ರಾಜೋಪಕರಣಯುತ ಸಾಹಿತ್ಯವ ||
ನೆಮ್ಮುಗೆಯ ದಾಸಿಯರ ಕರದೊಳಿರಿಸುತ್ತೆ ಸಖಿ-
ಸಮ್ಮತಿಯೊಳಾಗ ರನ್ನದ ಮೇಣೆಯನ್ನೇರು-
ತೊಮ್ಮನದೊಳೈದಿದಳು ಮಧುಕೇಶ್ವರಾಲಯಕೆ ಸೌಂದರ್ಯ ಮೂಲಾಯನಿ ||೩೨||

ಜಗವ ಸೃಷ್ಟಿಸಿದ ಬ್ರಹ್ಮನನು ಸೃಜಿಸಿದ ಮಹಾ-
ನಗಜೆಯೀಮಾಯೆಯ ಸ್ವರೂಪವನು ಬಣ್ಣಿಪುದು
ಬಗೆಗೆ ಸಾಧಿಸಲಹುದೆ ವಿಷ್ಣುವನು ಪಡೆದಾಳ್ವಮಾಯೆಯ ಕಳೇಬರವನು ||
ಮಿಗೆನುತಿಸಲೀ ರಸನೆಯಣುಬಲಕೆ ಸಾಧ್ಯವೆ
ಮಿಗಿಲೆನಿಪ ರುದ್ರನಂ ರಚಿಸುತ್ತೆ ಸಂಹರಿಸು-
ವಗಣಿತ ಮಹಾಮಾಯೆಯಂ ತರ್ಕಿಪುದು ಭಾವಕೆಂದಾದಡುಂ ಘಟಿಪುದೆ || ೩೩ ||

ಈಪರಿಯೊಳಿಹಮಾಯೆ ಮೇಣೆಯಿಂದಿಳಿಯುತ್ತೆ
ನೋಳ್ಪರನು ಕಣ್ಗೋಲಿಸಿಂದೆಚ್ಚು ಶಿಕ್ಷಿಸುತೆ
ದೀಪವಂ ಮೊಗದೊಗರಿನಿಂ ಮಂದಗೊಳಿಸುತ್ತೆ ತಾನು ಗುಡಿಯೊಳಗೈದುತೆ ॥
ಲೋಪವಿಲ್ಲದೆ ಪೂಜೆಯುಪಕರಣಗಳ ಕೊಳುತೆ
ಪಾಪಹರಶಿವಲಿಂಗ ಸಮ್ಮುಖದೆ ಕುಳ್ಳಿರುತ-
ಲಾಪತಿಯ ಕಾಮ್ಯತೆಯ ಮನದೆ ಸಂಕಲ್ಪಿಸುತೆ ಯಜಿಸಲಾದಳು ನಲಿಯುತೆ ॥೩೪॥

ತಿಳಿಯಗ್ಗವಣಿಯರ್ಘ್ಯಪಾದ್ಯ ಪಂಚಾಮೃತಾ-
ದಿ ಲಸತ್ಸದಭಿಷೇಕಸಾಮಗ್ರಿಯೊಂದಿರ-
ಲ್ಕಳಿಮುಟ್ಟದೆಸೆವಪರಿಮಳವೊಸರ್ವಕುಸುಮಚಯಮೃದುಬಿಲ್ವಮುಖ್ಯನಾನಾ ॥
ಲಲಿತಪತ್ರಪ್ರಚಯಮೆಸೆಯೆ ಘಮಘಮಿಪ ಮನ-
ಮೊಲಿಪ ಗಂಧವು ಸದಕ್ಷತೆಯ ಚಿತ್ತವಿಸಲುರು-
ಫಲಪಕ್ವಮಧುರಾನ್ನನೈವೇದ್ಯಮೆಸೆದಿರಲು ಘಮಘಮಿಪ ತಾಂಬೂಲವು ॥ ೩೫ ॥

ಸದ್ದಕ್ಷಿಣಾಛತ್ರಚಾಮರಾದಿಯು ಮಿಸುಗೆ
ಹೃದ್ದೇಶದೊಳು ಮಧುಕಲಿಂಗಮಂ ಸ್ಥಾಪಿಸುತೆ
ನಿರ್ದೇಶದಿಂ ಹೊರಗಣುಪಕರಗಳ ನಿರ್ಮಿಸುತೆ ಪೂಜೆಸಿದಳು ಮಾಯೆ ॥
ಉದ್ದೇಶದಿಂದಿಂತು ಹೊರಗೊಳಗುಮೊಂದಾಗಿ
ಶ್ರದ್ಧಾತ್ಮಳಾಗಿ ಲಿಂಗವನೆ ಜಾನಿಸುತಿರಲು
ನಿರ್ಧಾರಮಾರೆ ಫಲಿಸೆ ಲಿಂಗದಿಚ್ಛೆಯೊಳಲ್ಲಮಪ್ರಭುವರಂ ತಿಳಿಯುತೆ ॥ ೩೬ ॥

ಭಿಕ್ಷುಕನ ವೇಷವನು ಧರಿಸುತ್ತಲಲ್ಲಮಂ
ಕಕ್ಷದೊಳು ಮರ್ದಳೆಯ ಬಂಧಿಸುತೆ ಬಾರಿಸುತೆ
ತತ್ಕ್ಷಣದೊಳೈದಿದನು ಪದಿನೆಂಟನೆಯ ವಯದ ಪ್ರಾಯದವನಂತೆ ತೋರಿ ॥
ವಕ್ಷವದುಮಗಲಾಗಿ ಭುಜವು ಮಿಗಿಲಾಗಿರೆ ಮ-
ಹೋಕ್ಷವಹಿಸುವ ಪೆಗಲುಮುನ್ನತಿಯೊಳಾ ಕಲ್ಪ-
ವೃಕ್ಷವನು ಪಳಿವಂಗವಿರೆ ಗುಡಿಯ ಹೊರನಿಂದು ಮರ್ದಳೆಯ
ನುಡಿಸುತಿಹನು ॥ ೩೭ ॥

ಮರ್ದಳೆಯ ಬಾರಿಸುವ ಚತುರತೆಗೆ ಪುರಜನರು
ಮುಗ್ಧರಾಗುತೆ ಬಂದು ಗುಡಿಯಲ್ಲಿ ನೆರೆದಿಹರು
ಸದ್ದುಮಾಡದೆ ಕುಳಿತು ತಿಳಿದವರು ತಿಳಿಯದವರೆಲ್ಲರಾಲಿಸುತಿರುವರು ||
ಎದ್ದಳಾಮಾಯೆ ಬೆರಗಾಗಿ ಪೂಜೆಯ ಮುಗಿಸಿ
ಬದ್ಧಮಾನಸಳಾಗಿ ನಲಿಯಲಾದಳು ಬಯಸಿ
ಮುಗ್ಧೆಯರನಟ್ಟಿದಳು ಕರೆಯಲವನಂ ಗೀತಕಲೆಗದಾರ್ ಮೆಚ್ಚದವರು ? || ೩೮ ||

ಬಂದನಾ ಪ್ರಭು ಗರ್ಭಗುಡಿಯ ಮುಂಬಾಗಕ್ಕ-
ವಿಂದುವದನೆಯು ನೋಡಿ ಸುಮಶರನ ಶರಹತಿಗೆ
ನೊಂದು ತಿರುಕನೊಳಿನಿತು ರೂಪಾತಿಶಯವನಿತ್ತಾಬ್ರಹ್ಮನಂ ಬೈಯುತ ||
ಕಂದಿ ಮನದೊಳು ಮಾಯೆ ನಿಟ್ಟುಸುರು ಬಿಡುತಲಾ-
ಕುಂದರದನೆಯರಿಂಗೆ ನುಡಿಸಲ್ಕೆ ಸೂಚಿಸಲು
ಮಂದಹಾಸ್ಯದೊಳಂದು ಮಾತನಾಡಿಸತೊಡಂಗಿದರು ಸಖಿಯರ್
ಪ್ರಭುವನು || ೩೯ ||

ನಿನ್ನ ಪೆಸರೇನಯ್ಯ ನಿನ್ನೂರದಾವುದೈ
ನಿನ್ನ ತಾವೆಲ್ಲಿರ್ಪುದೈ ಪೇಳು ಪೇಳೆನಲು
ಸನ್ನುತಾಂಗಿಯ ನೋಡಿಯಲ್ಲಮಪ್ರಭುರಾಯನಾಗನಗುತಿಂತೆಂದನು ||
ಎನ್ನ ಪೆಸರಲ್ಲಮಂ ಪರದೇಶಿಯಾನಿರುವೆ-
ನಿನ್ನಿರ್ದುದೇ ತಾವದೆಂದೆನಲ್ಕಾ ವನಿತೆ
ತನ್ನೊಡತಿಯಾಜ್ಞೆಯಿಂದವಗೆತಮ್ಮ ನಾಟ್ಯಶಾಲೆಯೊಳಗಿರಲು ಕೇಳೆ || ೪೦ ||

ಅಲ್ಲಮನು ನಿರ್ವಾಹದಿಂದೊಪ್ಪಿ ಮರ್ದಳೆಯ
ಸಲ್ಲಲಿತ ಕಲೆಯನ್ನು ಕಲಿಸುತಿರ್ದನು ಜನರಿ-
ಗಲ್ಲಿರ್ದ ತತ್ಕಲಾಕೋವಿದರಿಗೆಲ್ಲರಿಗು ಮೇಲಾಗಿ ಮೆರೆಯುತಿಹನು ||
ಅಲ್ಲಿಂದ ಮೊದಲುಗೊಂಡಾಮಾಯೆಯುರುತಾಪ-
ಮುಲ್ಲಸಿತಮಾಗುತ್ತೆ ಬಳಲಿ ಸೊರಗುತ್ತವಳು
ತಲ್ಲಣಿಸಿ ನಾಚಿಕೆಯೊಳಾರಿಗುಸರದಿರಲ್ಕೆ ಮದನಮಾಸಿಯೆಂಬ ಸಖಿಯು || ೪೧ ||

ಬಂದು ಚತುರತೆಯಿಂದೆ ತನ್ಮನೋಗತವನರಿ-
ದಂದು ಜಾಣ್ಮೆಯೊಳಿರುಳೊಳಲ್ಲಮನ ಬಳಿಗವಳ
ಹೊಂದಿಸುತೆ ಬರಲಿತ್ತ ಮಾಯಾಂಗನೆಯು ತನ್ನ ಹಾವಭಾವಾಭಿನಯದ ||
ಬಂಧುರ ಸುವಿಭ್ರಮದೊಳಲ್ಲಮನನಪ್ಪಲಾ-
ಸುಂದರಿಯು ಮೊದಮೊದಲು ನೆಗಳ್ದಯತ್ನಗಳಳಿಯೆ
ಹೊಂದಿಯಪ್ಪಿದಳು ಮೇಲ್ವಾಯ್ದು ಬಯಲಪ್ಪಿದಂತಾಯ್ತು ಕನಸಾಯ್ತು
ಸೊಗವು || ೪೨ ||

ಗಹಗಹಿಸಿ ನಗುತಿರ್ದನಲ್ಲಮಪ್ರಭುವರನು
ದಹದಹಿಪ ತಾಪದೊಳು ಬಳಲುತಿರ್ದಳು ಮಾಯೆ
ಸಹಸಹಿಸಿಕೊಳುತಾಗ ಮಾನಕಗಿದರಮನೆಗೆ ಬಂದಳೊಯ್ಯನೆ ಮಾಯೆಯು ||
ಅಹರಹರದೊಳು ಕಾಮತಾಪಪೀಡಿತಳಾಗಿ
ಬಹುಬಹುಳವಾಗಿ ಮೂರ್ಛೆಯದು ಘಟಿಸುತ್ತಿರಲು
ಗಹಗಹನವಾದ ಸುಜ್ಞಾದದಿಂದರಿದಿದನು ಕೈಲಾಸದಿಂದೇವಿಯಾ || ೪೩ ||

ವಿಮಲೆಯೆಂಬುವ ರುದ್ರಕನ್ನಿಕೆಯ ಕಳುಹಿದಳು
ನಿಮಿಷದಲಿ ರುದ್ರಕನ್ನಿಕೆಯೈದಿ ನೋಡಿದಳು
ಕ್ರಮವಿಡಿದು ಮಾಯೆಯಾನನದಿಂದೆ ಘಟಿಸಿರ್ಪ ದುರ್ದಶೆಯ ನೆರೆ ತಿಳಿದಳು ||
ಸಮತೆಯಿಂದಲ್ಲಮನ ಚರಿತಮಂ ತಿಳುಹಿಸಲ್
ಕಮಲಮುಖಿಯುಕ್ತಿಗೊಪ್ಪದೆ ಮಾಯೆ ಬಂದಿಹಳು
ರಮಣಿಯೊಡಗೂಡಿಯಲ್ಲಮನ ಪರಕಿಸಲೆಂದು ಮತ್ತೆ ಶೋಧಿಸಿ ಗುಡಿಯೊಳು ||೪೪||

ಗುಡಿಯೊಳಗೆ ಮರ್ದಳಿಯ ನುಡಿಸುತಿರ್ಪಲ್ಲಮನ
ಕೆಡಹಿಕೊಳ್ಳಲು ಮಾಯೆ ಮತ್ತೆ ಸಲೆ ಯತ್ನಿಸಲು
ತೊಡಗಲಾದಳು ಪ್ರಭುವ ನಿರೀಕ್ಷಿಸುತೆ ಕೋಪದಿಂ ಮರ್ದಳೆಯ
ನೊಗೆದೋಡಿದಾ ||
ತಡೆಯುದಲೆ ಮಾಯೆ ಬೆಂಬತ್ತಿದಳು ಕೆಳದಿಯರ
ಗಡಣದೊಡವೆರೆದು ಜನರೀಕ್ಷಿಸುತೆ ನಗುತಿರ್ದ-
ರುಡುಪಮುಖಿಯುಮ್ಮರಸನಾತ್ಮಜೆಯು ಮಾನಗೆಟ್ಟಿಹಳೆಂದು ಕೂಗಾಡುತ ||೪೫||

ರುದ್ರಕನ್ನಿಕೆಯೊಡನೆ ಮಾಯೆ ಶೋಧಿಸುತಿರಲು
ರೌದ್ರಮಾಯೆಗೆ ಬೆದರಿ ಯೋಗಿಗಳು ನುತಿಸಲ್ಕೆ
ರುದ್ರನ ನಿರಂಜನಕಾಲಾತ್ಮಕ ಪ್ರಭುವಲ್ಲಮಂ ಮಾಯೆಯನು ತಳ್ಳಲು ॥
ಭದ್ರತೆಯನಾಂತು ನಿಂದನು ಮಾಯೆಯೆದುರಿನೊಳು
ಕ್ಷುದ್ರಮಾಯೆಗೆ ಸಿಗುವನಲ್ಲಮುಲ್ಲಮನೆನಲು
ಚಿದ್ರವಿಯೆ ಮಾಯೆಯನು ಪೊರೆಯೆಂದು ನಮಿಸಿದಾ ವಿಮಲೆಗೆಂದನು
ಪ್ರಭುವರ ॥ ೪೬ ॥

ತಾಯೆ ಕೇಳ್ ಸತ್ವಗುಣಿಯಿವಳಾಗದನಕನಿರ್-
ಮಾಯಿಕಾಲ್ಲಮನನರಿಯಲ್ಕೆ ಬಾರದು ಮನಕೆ
ಸಾಯುಸವದೇಕೆನಲು ಕನಸಿನೊಳು ಮತ್ಸುಖದ ಸವಿಯಗೊಂಡೀಗೇತಕೆ ॥
ನ್ಯಾಯವಾಡುವದೆಂದು ಮಾಯೆ ನುಡಿಯಲ್ಕೆ ಪ್ರಭು-
ರಾಯ ನುಡಿದನು ನಿನ್ನ ಭ್ರಾಂತಿಯದು ಕನಸೆಂಬು-
ದಾಯಿತಿಂದಿಗೆ ನಮ್ಮದರ್ಶನದ ಸೊಗವೆನುತೆ ಗುರುಗುಹೇಶ್ವರನೈದಿದಂ ॥ ೪೭ ॥

ಆಗಳಾ ಮಾಯೆ ರೋದಿಸಲಾದಳಗಜೆಗಾಂ
ಪೋಗಿಪೇಳುವದೆಂದು ದುರ್ದಶೆಯನೆಂದೆನುತ
ಕೂಗುತುರುಳಾಡುತಿರೆ ವಿಮಲೆ ಸಂತೈಸಿ ಕೈಲಾಸಕ್ಕೆ ಕರದೊಯ್ದಳು ॥
ಸಾಗಿಬಂದಾಲಿಯರು ಪೇಳ್ದರೀ ಕಥೆಯನ್ನು
ಬಾಗಿ ಮಮಕಾರ ಮೋಹಿನಿಯರಿಗೆ ಶೋಕಿಸುತೆ
ನೀಗಲನ್ನಾದಿಕವನವರಹಂಕಾರಗುರುಬಂದು ಶಾಂತಿಯ ಪೇಳ್ದನು ॥ ೪೮ ॥

ಬಂದು ಕೈಲಾಸಕ್ಕೆ ತಾಮಸಿಕ ಮಾಯೆಮಣಿ-
ದಂದು ನಿಂದಿರೆ ವಿಮಲೆಯಿಂದೆಲ್ಲ ತಿಳಿಯುತುಮೆ
ಕಂದುಗೊರಳಗೆ ನಮಿಸಿ ಕೇಳಿದಳು ಪ್ರಭುವಿನಂತಸ್ಥವನು ತಿಳಿಪುದೆಂದು ॥
ಇಂದುಮೌಳಿಯು ನಗುತೆ ದೇವಿಗುಸುರಿದನಾಗ-
ಳಿಂದುಮುಖಿನೀನೀಗ ನಿನ್ನ ಸಾತ್ವಿಕ ಕಳೆಯ
ನಂದದಿಂ ಕಳುಪಿ ತಿಳಿ ವಾಗತೀತವದಿಹುದು ಭಕ್ತಿಸುಜ್ಞಾನದಿರವು ॥ ೪೯ ॥

ಪ್ರಮಥರೆಲ್ಲರು ನಿರಂಜನ ಘನವನರಿಯಲೆಂ-
ದವಿತಭಕ್ತಿಯ ವಹಿಸುತ್ತೈದಿರುವರಾ ಭೂಮಿ-
ಯವುಳತರ ಕೈಲಾಸವಾಗಿಹುದು ನಿನಗೇನು ತಿಳಿಯಲಾರದ ವಿಷಯವೇ ||
ಸಮತೆಯಿಂ ಶಿವನಿಂತು ನುಡಿಯೆ ಪಾರ್ವತಿಯೊಪ್ಪಿ
ವಿಮಳಸಾತ್ವಿಕ ಕಳೆಯ ಕಳುಹಿಸುತೆ ಮರ್ತ್ಯಕ್ಕೆ
ಪ್ರಮುದದಿಂದಭವನೊಳು ಬೆರೆದಿರ್ಪಳಾ ಶಿವೆಯು ರುಚಿಯಡಗಿದೋಲ್
ಪಾಲೊಳು || ೫೦ ||

ಏನು ಪೇಳುವೆನುಮೆಯ ಸಾತ್ವಿಕದ ಮಹಿಮೆಯನು
ಜ್ಞಾನಿಮುನಿ ಋಷಿಯತಿಗಣಾನುಭವಿಸುವ್ರತತ-
ಪೋನುಭವ ಜಪಯಜನಭಜನಗಳ ಸತ್ಫಲವು ಸಿದ್ಧಿಸಿತು ಶ್ರಮವಿಲ್ಲದೆ ||
ದಾನಾದಿ ಸತ್ಕರ್ಮ ಬುದ್ಧಿಕಳೆಗೊಂಡಿಹುದು
ದಾನವಿಕ ದುಷ್ಪ್ರವರ್ತನವು ಕಳೆಗುಂದಿಹುದು
ಮಾನವರ ಮನದಲ್ಲಿ ದೈವಕಳೆ ವರ್ಧಿಸಿತು ದಿನದಿನಕ್ಕೆ ಮಿಗಿಲಾಗುತೆ || ೫೧ ||

ಐದು ತತ್ವಗಳಲ್ಲಿ ನಿಃಸ್ವಾರ್ಥತೆಯನಿತ್ತು
ಐದ್ದಿ ಶಿವತತ್ವದೊಳು ಸ್ವಸ್ಥಿತಿಯ ನೊಲೆದಿತ್ತು
ಐದೆಯುದ್ಭಿಜ್ಜಾಖ್ಯದಿ ಪಿಂಡಜಾಂತಂ ಸರ್ವ ವರ್ಗದೊಳು ಸೊಗವನಿತ್ತು ||
ಐದಿಯಂತಃಕರುಣದೊಳು ಸುಜ್ಞತೆಯನಿತ್ತು
ಗೈದ್ದ ಸತ್ಕರ್ಮದೊಳು ಧರ್ಮಸಂಜ್ಞೆತೆಯಿತ್ತು
ಮೈಯ್ದಜಗದಾಧಾರವೆನಿಸುತ್ತೆ ಶಿವೆಯು ಸತ್ವಾಂಶವಾವರಿಸುತಿತ್ತು || ೫೨ ||

ವರಸತ್ವದಿಳೆಗಳಿಂ ಪರತತ್ವಕಲೆಗಳಿಂ
ಸರಸತ್ವಫಲಗಳಿಂ ಪರಮುತ್ವಕುಲಗಳಿಂ
ಸುರಸತ್ವನದಿಗಳಿಂ ಭರಣತ್ವ ಸಿಧಿಗಳಿಂದುರುತಪೋನಿಧಿಗಳಿಂದ ||
ಚಿರಸತ್ವಗುಣಗಳಿಂ ಶರಣತ್ವ ಜನಗಳಿಂ
ಪರಸತ್ವನದಗಳಿಂ ಸರಳತ್ವಮುಖಗಳಿಂ
ಸರಸತ್ವಪದಗಳಿಂ ಕರ್ನಾಟದೇಶವೈದಿಹುದು ಸಂಪದಗಳಿಂದ || ೫೩ ||

ಈ ವಿಧದ ಕರಿನಾಡ ದಕ್ಷಿಣದ ಭಾಗದೊಳು
ತೀವಿದುದ್ಯಾನವನ ಧಾನ್ಯ ಸುಕ್ಷೇತ್ರದಿಂ
ಭೂವಿನುತ ಕಳಮೇಕ್ಷು ಸಂವೃದ್ಧಸಾನುವಿಂ ಕಾಸಾರವಿಸ್ತಾರದೆ ||
ಭಾವಭೂಷಿತ ಭವ್ಯ ರಾಜಸದನಂಗಳಿಂ
ದೇವತೇಡಿತ ದಿವ್ಯದೇವಾಲಯಂಗಳಿಂ
ಭಾವುಕರಕಣ್ಮನಕದಾಗಿಯುಡುತಡಿಯೆಂಬ ಪೆಸರಿನೊಳು ಪುರವೆಸೆವುದು || ೩೪ ||

ಆ ಪುರದೆ ನೆಲೆಸಿಹನು ಶಿವಭಕ್ತಮಾನಿತನು
ಲೋಪವಿಲ್ಲದೆ ವೀರಶೈವ ಧರ್ಮದೊಳಿಹನು
ಪಾಪವಿರಹಿತನಾಗಿ ಲಿಂಗಾರ್ಪಣವ ಮಾಡಿ ಭೋಗಿಪನು ಸುಖದುಃಖವ ||
ಕೋಪಾದಿಗಳಧರ್ಮಿಜನರಿಗುಪಯೋಗಿಪನು-
ಮಾ ಪುಣ್ಯ ಗುಣಗಳನು ಧರ್ಮಕುಪಯೋಗಿಪನು
ನೈಪುಣ್ಯಮಂ ಪಡೆದು ಗುರುಲಿಂಗ ಜಂಗಮರ ಸೇವೆಯೊಳು
ಬಾಳುತಿಹನು || ೩೫ ||

ಇವಗೆ ನಿರ್ಮಲನೆಂಬ ನಾಮವದು ವಿಖ್ಯಾತ-
ಮಿವನಿಗಿರ್ದಳು ಸತಿಯು ಸುಮತಿಯೆಂಬುವಳಾಕೆ-
ಯವಿರತವು ಸೇವಿಪಳು ಪತಿಗೆ ನೆರಳಂತಿರ್ದು ಗುರುಲಿಂಗಜಂಗಮರನು ||
ಅವಳೆಲ್ಲ ಜಗವನ್ನು ತನ್ನಂತೆ ಭಾವಿಪಳು
ಸವಿನಯದೊಳತಿಥಿಯಭ್ಯಾಗತರ ಸತ್ಕರಿಪ-
ಳವನಿಯೊಳಗಿರ್ಪ ಸದ್ಗುಣಗಳಿಗೆ ತವರಾಗಿ ರಾಜಿಪಳು ಸುಸತಿವ್ರತೆ || ೩೬ ||

ಅನ್ಯದೇವರಿಗೊಲಿಯುರನ್ಯಧನಕಾಶಿಸರು
ಮನ್ಯಧರ್ಮವ ಪಳಿಯರನ್ಯಹಿಂಸೆಯಮಾಡ-
ರನ್ಯರಂ ದ್ವೇಷಿಸರುಮನ್ಯರಂ ಯಾಚಿಸರು ಮಾಗಳಾ ದಂಪತಿಗಳು
ಅನ್ಯರಿಗೆ ನೀಡುವರುಮನ್ಯರೊಡನಾಡುವರು-
ಮನ್ಯರಂ ಪಾಡುವರುಮನ್ಯರಂ ಬೇಡುವರು
ಮನ್ಯರಂ ತಮ್ಮಂತೆ ಬಗೆಯುವರು ಗುರುಲಿಂಗ ಜಂಗಮರ ಸೇವೆಗಾಗಿ || ೩೭ ||

ಜಗವನಾವರಿಸುತಾಶಿವೆಯ ಸಾತ್ವಿಕ ಕಲೆಯು
ಬಗೆಯುತೀ ಸುಮತಿ ನಿರ್ಮಲರಿಂಗೆ ಸಂತತಿಯ
ಸೊಗವೊಂದನೀಯಬೇಕೆಂದು ದೇವಿಯ ನೆನೆದು ಸುಮತಿ ಗರ್ಭವನೈದಿತು ||
ಬಗೆಯೊಳಾನಂದವಾವರಿಸಲಾಯಿತ್ತವಳಿ-
ಗಗಣಿತ ಪ್ರೇಮಮುಂಟಾಯ್ತು ಶಿವಭಕ್ತಿಯೊಳು
ಸೊಗಯಿಪ ಶಿವಜ್ಞಾನವೈರಾಗ್ಯಮತಿಯಾಯ್ತು ಗರ್ಭಚಿನ್ಹಂ ವರ್ಧಿಸೆ || ೫೮ ||

ಸಂತತಿಯ ಸಿದ್ಧಿಗಾಗಿವಳು ಯತ್ನಿಸಲಿಲ್ಲ
ಸಂತತಿಗೆ ಗುರುಲಿಂಗಚರರನರ್ಚಿಸಲಿಲ್ಲ
ಸಂತತಿಯ ನೆನೆಯದಿಂತಪ್ಪ ಗರ್ಭವ ಕಂಡಳಾ ಭಕ್ತಿಘನವೆಂತುಟೋ ||
ಸಂತತಿಯ ನೆನೆದಳಾ ಬಿಜ್ಜಮಾದೇವಿ ತಾ
ಸಂತತಿಯ ಬಯಸಿ ಪಡೆದಳು ಶರಣೆಯುಮ್ಮವ್ವೆ
ಸಂತತಿಯ ಬಯಸದಲೆ ಪಡೆದವರೊಳಿವಳಾದ್ಯಳೆನಲೆಸೆಯೆ ಶುಭಚಿನ್ಹವು || ೫೯ ||

ಪರಮ ಸಾತ್ವಿಕತೇಜನೊಳಗಿಹುದು ಮೇಲೆತಾವ್
ಮೆರೆಯಬಾರದೆನುತ್ತಮುಡಗಿದವೊ ಕಡಿಗಳೆನ-
ಲೆರಕಗೊಂಡುದರಮದು ಹೊಳೆಯಲಾಯಿತ್ತುಮೆಯ ಕಳೆಯ
ಮಹಿಮೆಯನರುಹಲು ||
ಭರದೆ ತದ್ವರ್ಣದೋಲ್ ತನುಬೆಳ್ಪನಾಂತವಳು-
ದರಮಾಯೆ ಹೊರಹೊಮ್ಮಿತೋ ಯೆನಲು ಮೊಲೆದುದಿಯು
ನೆರೆ ಕರ್ಪನಾಂತದರ ಗೌರವವ ಸೂಚಿಸಲು ನಡೆನುಡಿಯು
ಮಂದಮಾಯ್ತು || ೬೦ ||

ನಿರ್ಮಲನ ಸಮ್ಮೋದಕೆಣೆಯಿಲ್ಲಮಾಪ್ತರುರು-
ಕರ್ಮಘನಸನ್ಮಾನಕಳತೆಯಿಲ್ಲವು ತಿಳಿಯೆ
ಕೂರ್ಮೆಯಿಂದಿಂತೇಳು ತಿಂಗಳುಂ ಕಳೆಯೆ ಬಳಿಕೆಂಟನೆಯ ಮಾಸದಲ್ಲಿ ||
ಧರ್ಮಗುರು ಚನ್ನಮಲ್ಲಾರ್ಯನಂ ಕರೆಯಿಸುತೆ
ಪೇರ್ಮೆಯಿಂ ಲಿಂಗಮಂ ಕಟ್ಟಿಸಿ ಶಿವಾನುಭವ
ಶರ್ಮದೊಳು ನಿರ್ಮಲನು ಸುಮತಿಯೊಡನಿರುತಿರಲದೇ ಪರಮ ಸುಭಗತ್ವದಿ || ೬೧ ||

ಪರಿಣಮಿಸಿ ಪಿಂಡವದು ಬಳಯುತಿರೆ ಗರ್ಭಿಣಿಗೆ
ನೆರೆಬಯಕೆಗಳು ತೋರಲಾದವಾಂ ಪೇಳ್ವೆನೇಂ
ಪರಮಾನುಭವದಾಸೆ ಲಿಂಗಾರ್ಚನೆಯಕಾಂಕ್ಷೆ ಚರಪಾದತೀರ್ಥೇಚ್ಛೆಯು ||
ಚಿರಸುಪ್ರಸಾದೇಷ್ಟಮುರುಸುಗುಣಗಣವಾಂಛೆ
ಹರಕಥಾಶ್ರವಣಾಸ್ಥೆ ಶರಣ ಸೇವಾಪೇಕ್ಷೆ
ವರನೀತಿಧರ್ಮದಾಕಾಂಕ್ಷೆ ಪೆಚ್ಚುತಿರಲ್ಕೆ ಪೂರೈಸೆ ನವ ಮಾಸವು || ೬೨ ||

ಹರಭಕ್ತಸಂಕುಲದ ಶ್ರದ್ಧೆಯಿಮ್ಮಡಿಯಾಗೆ
ಪರಮ ಮಾಹೇಶ್ವರರ ನಿಷ್ಠೆ ವರ್ಧಿಸುತಿರಲು-
ವರಸುಪ್ರಸಾದಿಗಳ ಸಾವಧಾನತೆ ಬೆಳೆಯೆ ಪ್ರಾಣಲಿಂಗಿಗಳಾ ಮಹಾ- ||
ಪರಿಣತೆಯು ಫಲಿಸುತಿರೆ ಶರಣರನುಭೂತಿಯದು
ನೆರೆಸಿದ್ಧಿಸಲ್ಕಾಗಲೈಕ್ಯಜನಸಮರಸತೆ
ಚಿರಸುಖವನೀಯುತಿರಲುದಿಸಿತಾ ಸತ್ಕಲೆಯು ಪೆಣ್‌ರೂಪಿನಿಂ ಕ್ಷಿತಿಯೊಳು || ೬೩ ||

ಅವತರಿಸಲೆಲ್ಲರ ಮನಂಗಳಿಗೆ ಸೊಗವಾಯ್ತು
ಶಿವೆಗೆ ಸಮ್ಮುದವಾಯ್ತು ಶಿವನಿಗುರೆ ಸೊಗವಾಯ್ತು
ದಿವಿಜಾದ್ಯರಿಗೆ ಪರಮಮೋದವಾಯಿತು ಕುಸುಮವರ್ಷಣವು ಮಿಗಿಲಾಯಿತು ||
ಶಿವಭಕ್ತಸಂಕುಳಕೆ ಘನಹರುಷವಾಯಿತ್ತು
ಭುವನ ಸಲಿಲಾಗ್ನಿಪವನದಿವಮುಮಳಿನವಾಯ್ತು
ಭುವನದೊಳು ದೇವಾಲಯಂಗಳೊಳು ವಿಮಲದೀಪೋತ್ಸವಂ ತಾನಾಯಿತು ||೬೪||

ಆಗ ಸಮ್ಮುದದೆ ನಿರ್ಮಲನು ದಾನವನೆಸಗ-
ಲಾ ಗುರೂತ್ತಮ ಚನ್ನಮಲ್ಲಿಕಾರ್ಜುನದೇವ-
ಯೋಗಿ ಬಂದೀಕ್ಷಿಸುತೆ ಕಾರುಣಿಕಳಿವಳೆಂದು ಲಿಂಗಮಂ ಧರಿಸಿ ಮತ್ತೆ ||
ಯೋಗದಿಂ ಶಿವಷಡಕ್ಷರಿಯನುಪದೇಶಸುತೆ
ರಾಗದಿಂ ಮಹಾದೇವಿಯಾಖ್ಯೆಯನಿರಿಸ-
ಲಾಗಮಜ್ಞನು ತಿಳಿಸಲೈವೆಯರು ಪೆಸರಿಟ್ಟು ಪಾಡಿದರು ಜೋಗುಳವನು || ೯೫ ||

ಸಚ್ಚಿದಾನಂದೆ ಜೋ ನಿತ್ಯಪರಿಪೂರ್ಣೆಜೋ
ಅಚ್ಚಚಿತ್ಕ್ರಿಯೆ ಜೋ ಸತ್ಯಸಿಮ್ಮಾಯೆ ಜೋ
ಯಿಚ್ಛಿತಾಮ್ನಾಯೆ ಜೋ ಮರ್ತ್ಯಸುಪ್ರಾಣಿ ಜೋ ಭೃತ್ಯಗಿರ್ವಾಣೀಜೋಜೋ||
ಸ್ವಚ್ಛನಿರಪಾಯೆ ಜೋ ನಿತ್ಯ ನಿರ್ವಾಣಿ ಜೋ
ಅಚ್ಯುತಾನಂದೆ ಜೋ ಸ್ತುತ್ಯಶರ್ವಾಣಿ ಜೋ
ಉಚ್ಚಸಧ್ಯೇಯೆ ಜೋ ಜೋ ಮಹಾದೇವಿ ಜೋಯೆಂದು ತೂಗಿದರು
ನಲಿದು || ೬೬ ||

ಅಂತು ಸಂಧಿ ಎರಡಕ್ಕಂ ಪದಗಳು ೮೧ ಕ್ಕಂ ಶುಭಂ

|| ಶ್ರೀಗುರು ಸಿದ್ಧಲಿಂಗಾಯನಮಃ ||

# ಶ್ರೀಅಕ್ಕಮಹಾದೇವೀ ಪುರಾಣಂ

## ೩ ನೇ ಸಂಧಿ

ಸೂಚನೆ— ಹರುಷದೆ ಮಹಾದೇವಿ ಶುಭಲೀಲೆಯೊಳು ಬಳೆಯು-
ತುರೆ ಜನಕನಿಂ ಸಕಲಶಾಸ್ತ್ರಮಂ ಕಲಿಯುತುರು-
ತರಭಕ್ತಿಭೂಮಿಯೊಳು ಪದವಿಟ್ಟು ಶಿವಕಥಾ
ಗೋಷ್ಠಿಯೊಳಗಿರುತಿರ್ದಳು ||

ಮಡುವಿನೊಳು ಬೀಳ್ದಶಪ್ಪಿಂಗೆ ಲಿಂಗವ ತೋರೆದು
ಮೃಡಚರರ ಸೇವೆಯುಂಟೆಂದು ಪೋಗುತಿರಲ್ಕೆ
ಮಡಿವಳಯ್ಯನಹೊಣೆಯ ಕೊಟ್ಟು ಪುರುಷಾಕೃತಿಯೊಳುರು ಚರರಸೇವೆಯಲ್ಲಿ ||
ಬಿಡದೆ ನೆರವಾಗುತಂ ಮತ್ತೆ ಪರಿಕಿಪೆನೆಂದು
ಕೊಡೆ ಹೊನ್ನ ಲಿಂಗಯ್ಯನುರೆ ಮಿಡುಕಿ ಶರಣರಿಂ
ದೃಢಬುದ್ಧಿಗಲಿಸಿ ಲಿಂಗವ ಪಡೆದ ಚಂದಯ್ಯನಡಿಗಳಿರ್ಕೆನ್ನ ಮನದೆ || ೧ ||

ಆ ಶಿಶುವಿನುತ್ತಮೌಜವ ಕಂಡು ಕತ್ತಲೆಯು
ವಾಸಿಸಲು ಬೆದರುತಲ್ಲಿಂದೆ ಕಾಲ್ದೆಗೆಯುತಂ
ಲೇಸಾದ ದೀವಿಗೆಯ ಶಳವನಾಶ್ರಯಿಸಿತ್ತು ದೀಪಗಳು ಕರ್ಪಿಡಿದವು ॥
ಭಾಸುರತೆಗಂಜಿ ನೋಳ್ಪ ಜನರಜ್ಞಾನತಮ
ಓಸರಿಸುತವರ ಮನಮುಮುಳತೆಯನಾಂತುದಾ-
ಕೂಸಿಗೆಲ್ಲರು ನಮಿಸಿ ಪೊಗಳುವರು ನೇಹವದು ಭಕ್ತಿಯೊಳು ಪರಿಣಮಿಸಿತು ॥೨॥

ಜಗದ ಗತಿಯಂ ನೋಡಿಕಂಣ ಮುಚ್ಚುವದೊಮ್ಮೆ
ಬಗೆದಿಲ್ಲಿ ಶಿವನಿರ್ಪನೋ ಯಿಲ್ಲವೋ ಯೆಂದು
ಮಿಗೆ ಪರೀಕ್ಷಿಸಲೆಂದು ಕಣ್ದೆರೆದು ನೋಡುವದು ಕಂಡು ಮೋದಿಸುವದಾಗ ॥
ಬಗಯೊಳಿಹ ಶಿವನನ್ನು ಜಾನಿಪುದೊಯೆನೆಕ್ಕೆಯು-
ಮುಗಿದು ಮೌನದೊಳಿರುವದೋರೋರ್ಮೆ ಜೀವನದ
ಬಗೆಗಾಗಿ ಯತ್ನಿಪರನೀಕ್ಷಿಸುತೆ ನಗುತಿಹುದು ವಿಷಯಕಗಿದಳುವದೊರ್ಮೆ ॥ ೩ ॥

ಶಿವನ ನಿಲವಂ ತೋರಗೊಡದಾದ ಮಾಯೆಯನು
ತವಕಿಸುತೆ ಗುದ್ದುವದೋ ಯೆನೆಕ್ಕೆಯ ಮುಟಗೆಯೆಸ-
ಗುವದೊಮ್ಮೆ ಕಾಲಕರ್ಮಗಳನ್ನು ಪೊದೆಯುವದೊಯೆಂಬಂತೆ ಕಾಲೊಗೆವುದು ॥
ಭವಜಾಡ್ಯಮಂ ಗೆಲಲು ಯೋಗನಿದ್ರೆಯೊಳಿಹುದೆ-
ನುವೊಲಾಗ ನಿದ್ರಿಸುವದೀ ಜನರಿಂಗೆಚ್ಚತ್ತಿ-
ರುವುದೆಂದು ಸೂಚಿಸಲಿಕೆಚ್ಚರಿಪುದೋರೋರ್ಮೆ ಶಿಶುವು ಸಜ್ಜನರ ಜಸವು ॥ ೪ ॥

ಮಾತೆ ಮಗುವಿಗೆ ಕಾಸಿದೆಣ್ಣೆಯಂ ಪೂಸಿಯೊಲೆ-
ದೋತು ತೀಡಿ ತದಂಗಮಂ ಕಿವಿಗೆ ತೈಲವನು
ಪ್ರೀತಿಮಿಗೆಯೆರಚಿ ಬಿಸಿನೀರಿನಿಂದೆರೆದು ಮೈಯೊರಸಿ ಭಸಿತವನು ಧರಿಸಿ ॥
ಖ್ಯಾತಿಯಿಂ ಶಿಶುವಿನುರುಲಿಂಗಪೂಜೆಯನೆಸಗು-
ತಾತುರದೆ ಬಣ್ಣದುರೆ ಕುಂಚಿಗೆಯ ಹೊದಿಸುತ್ತೆ
ಸಾತಿಶಯ ಮುದದೆ ಮೊಲೆಯೂಡಿ ತೊಟ್ಟಿಲೊಳಿಟ್ಟು
ಧೂಪಸದ್ವಾಸನೆಯೊಳು ॥ ೫ ॥

ತೂಗಿ ಮಿಗೆ ಜೋಗುಳವ ಪಾಡಿ ಮಲಗಿಸಿ ಮಗುವ-
ನಾಗ ಪುನೆಗೆಲಸಗಳ ಮಾಳ್ಪನಿತರೊಳಗೆದ್ದು
ಕೋಗಿಲೆಯ ದನಿಯಿಂದಲಳುತಿರುವ ಶಿಶುವನ್ನು ನೋಡಿ ತೆಗೆದೆತ್ತಿಕೊಂಡು ‖
ರಾಗದಿಂ ಮೊಲೆಯೂಡಿ ನೇಹದೊಳು ಮುದ್ದಾಡಿ
ತೋಗಿಲೊಳಗಿಟ್ಟಾಡಿಸುವ ಕಾಲದೊಳು ಸುಮತಿ
ಭೂಗರ್ಭದೊಳು ತನ್ನ ಸಮರಿಲ್ಲಮೆಂದರಿವಳಾ ಮಾತೆಯೇಂ ಧನ್ಯಳು ‖ ೬ ‖

ದೃಷ್ಟಿದೋಷವು ಮಗುವಿಗಾಗಬಾರದ ತೆರದೆ
ಶಿಷ್ಟತನದಿಂ ನೋಡಿಕೊಳ್ಳುತಿರ್ದಳು ಜನನಿ
ದುಷ್ಟರೋಗಗಳಾಗದಿರಲೆಂದು ಪಥ್ಯವನು ಗೈದು ಸಲೆ ಮೊಲೆಪಾಲನು ‖
ನಿಷ್ಠೆಯಿಂ ಶುದ್ಧವಾಗಿಟ್ಟುಕೊಳ್ಳುವಳಾಕೆ
ಕಷ್ಟಪೀಡೆಯ ಕಳೆವಳುಪಚಾರದಿಂದೆ ಮು-
ತ್ತಿಷ್ಟಲಿಂಗವನಗಲದಂತೆ ಶಿಶುಕಂಠದೊಳು ಧರಿಸಿ ಸೌಖ್ಯದೊಳಿಡುವಳು ‖ ೭ ‖

ಮಗಳ ಮೊಗಮಂ ನೋಡಿಯೆತ್ತಿ ಮುದ್ದಾಡುತಂ
ಸೊಗಯಿಪನು ಬಾಲಿಕೆಯ ಲೀಲೆಯಂ ಪರಿಕಿಸುತೆ
ನಗಜೆಯಿವಳಹುದೆಂದು ನಂಬುವನು ಮನದೊಳಗೆ ಸ್ವಸುಕೃತವು ಫಲಿಸಿತೆಂದು ‖
ಬಗೆದು ಸಾಮುದ್ರಿಕವನೀಕ್ಷಿಸುತೆ ಹರ್ಷಿಪನು
ಬಗೆಯೊಪ್ಪುತಿರೆ ಸತಿಗೆ ತೋರಿ ನಿರ್ಮಲನರುಪೆ
ಸೊಗವು ನಮಗಿಹಪರದೊಳಿವಳಿಂದ ದಿಟವೆಂದುಪೊಗಳಿ ಮುದ್ದಿಡುವಳೊಲಿದು ‖ ೮ ‖

ಶಿಶುವಿನಾನಂದಮುಖಮುದ್ರೆಯನು ಯೆವೆಯಿಕ್ಕ-
ದೊಸೆದು ನಿರುಕಿಸಿರಾಗಮಿಗೆ ಯೆತ್ತಿಯವಚಿ ಮು-
ದ್ದಿಸುತೆ ನೆತ್ತಿಯಮೂಸಿ ಕೆಳಗಿಳುಹದೋರ್ವರನುನಯದೆ ತಮ್ಮ ಮನೆಗೆ ‖
ಒಸೆದು ಕೊಂಡೊಯ್ದವರು ತಾಯಿಯಾಗ್ರಹಕೆ ಕಸ-
ವಿಸಿಯ ಪಡುತಾಗ ತಮಗಿಂತಪ್ಪ ಮಗುವೇಕು-
ದಿಸಲುಬಾರದೆನುತ್ತೆ ಮರು ಮರುಗಿ ತಿರುತಿರುಗಿ ತರುತಿರ್ದರಾಜನಗಳು ‖ ೯ ‖

ಇಂತು ನೇಹದ ನಿಧಿಯು ತಾನಾಗಿ ಬೆಳೆಯುತಂ
ಸಂತಸದೊಳಂಬೆಗಾಲೊಳು ನಡೆದು ಭೂಮಿಯು ನಿ-
ಶ್ಚಾಂತವೆನೆ ಶೇಷಾದಿಗಳುಮಿಂತು ಹೊತ್ತು ಮೆರೆಯುವರೆಂದು ತೋರಿಸುವೊಲು ||
ಅಂತು ಕೆಲದಿನಮಿರ್ದುಪಿತೃಗಳಾನಂದಿಸಲ್
ಕಾಂತಕೆಲ್ಲರು ಮೆಚ್ಚೆ ದಟ್ಟಡಿಯ ಲೀಲೆಯು ಸ-
ದಂತರಂಗವು ಮುದಿಸಲಿನಿತೊದಲ್ನುಡಿಯು ಮೊಗದಲ್ಲಿ ಸೊಗಯಿಸಲಾಯಿತು ||೧೦||

ಕವಿ ಹೋಲಿಪನು ಪೂರ್ಣಚಂದ್ರನಂ ಜನಮುಖಕೆ
ತಪೆಮಾನವರ ವದನಕೋಲಬಹುದಾದೊಡೇಂ
ನವಮಹಾದೇವಿಯಾನನಕೆ ಸಮವಾಗುವದೆ ಯೆಲ್ಲಿಹುದು ಲಾಲಾಸುಧೆ ||
ತವೆಯಿಂದರೊಳಿಹುದಾತ್ಮಚಿದ್ಬೋಧಸುಧೆಯು ಮೇಣ್
ಕವಿದಲ್ಲಿಹುದು ತನುಕ್ಷಯವು ಮತ್ತಿಲ್ಲುಂಟು
ಭವಭಯಕ್ಷತಿಯದಾವುದು ಶ್ರೇಷ್ಠವೆಂಬುದಂ ಬಲ್ಲವರು ತಿಳಿವುದೊಲಿದು ||೧೧||

ಮಂದಿಯಣುಗರ ಸಂಗಡಾಡಲಿಲ್ಲವಳಿಗೆಂ-
ದೆಂದು ಪುಸಿಕಳವು ಚಾಡಿಗಳು ಸಂಧಿಸಲಿಲ್ಲ-
ಮಂದಗೆಟ್ಟಶುಚಿಯಿಂ ಕಂಡ ಕಂಡವರ ಮನೆಯೊಳಗುಂಡು ತಿರುಗಲಿಲ್ಲ ||
ಒಂದುದಿನವಾದೊಡಂ ಲೋಕಬಾಲಕರಂತೆ
ತಂದೆತಾಯಿಗಳಲ್ಲಿ ಹಟವಗೈದಳಲಿಲ್ಲ
ಬಂಧು ಗುರುಹಿರಿಯರಿಗೆ ನಮಿಸಿ ಪ್ರೇಮವ ಪಡೆದು ಸತ್ಕೀರ್ತಿಯೋಲ್
ಬಳೆದಳು || ೧೨ ||

ಈಪರಿಯೊಳೈದುವರ್ಷಗಳಾಗೆ ತತ್ತನುಜೆ-
ಗಾಪಿತನು ತಾನೆ ವಿದ್ಯೆಯ ಕಲಿಸತೊಡಗಿದನು
ನೈಪುಣ್ಯದಿಂ ಧರ್ಮ ನೀತಿ ಶಿಕ್ಷಣವ ಕೊಡಲಾದಳಾಮಾತೆ ನಲಿದು ||
ಲೋಪವಿಲ್ಲದೆ ನಿರುತ ಮಧ್ಯಯನವೆಸಗುತ್ತ-
ಮಾಪಿತೃಗಳಂ ಗುರುಗಳನ್ನಾಗಿ ಭಾವಿಸುತ-
ಮಾ ಪುಣ್ಯಮತಿ ಮಹಾದೇವಿ ಸೇವಿಸಲಾದಳನುಪಮಿತ ಭಕ್ತಿಯಿಂದ || ೧೩ ||

ಬೆಳಗಿಂ ಮುಂದೇಳ್ದು ಶೌಚಾದಿಯಂ ತೀರ್ಚಿ
ಬಳಿಕ ಗುರುಹಿರಿಯರಂ ನಮಿಸಿ ಪಾಠವನೆಸಗೆ
ಜಳಕಮಂ ಮಾಡಿ ಶಿವಪೂಜೆಯಂ ಮುಗಿಸಿ ಪಾಕಾದಿಗೃಹಕೃತ್ಯಗಳನು ॥
ಕಳಕಳಿಕೆಯೋಳ್ ನೆಗಳ್ದು ಸುಶಿವಾನುಭವವ ಕೇಳ್-
ದುಳಿದ ಸಮಯದೊಳದನೆ ಮಾತೆಯೊಳು ಚರ್ಚಿಸಳು
ಕುಳಿತೋರ್ವಳೇ ಮನನಮಂ ಮಾಡುತಾ ವಿಷಯಮಂ ನಿಧಿ ಧ್ಯಾನಿಸ ವಳು ॥೧೪॥

ಸಕಲಶಾಸ್ತ್ರವನಿಂತು ಪಿತೃಮುಖದೆ ಕಲಿತು ತ-
ನ್ನಿಖಿಲ ವಿದ್ಯೆಯನಾಶಿವಾನುಭವ ಶಾಸ್ತ್ರವನು
ಸುಕರದಿಂ ತಿಳಿವುದಕೆ ಸಾಧನವನೆಸಗಿಳು ಶಿವಪೂಜೆಯಂ ಮಾಡುತ ॥
ಪ್ರಖರ ತತ್ತ್ವವಲಿಂಗದೃಷ್ಟಿಯಿಂದರಿಯಲ್ಕೆ-
ಯಕಳಂಕ ಚಿತ್ತಳತಿಯತ್ನಿಸಲು ತೊಡಗಿದಳು
ಸುಖದ ಮಾರ್ಗವ ಕಾಣಲಾದಳಾ ಸುಮತಿನಿರ್ಮಲರ ಕೃಪೆಯಿಂದಲವಳು ॥೧೫॥

ತನುಮನೋಭಾವವನು ಲಿಂಗತ್ರಯದೊಳಿಡುತ-
ಲನುಗೊಳಿಸಿ ತತ್ಸ್ವರೂಪನಾತ್ಮದೊಳು ಬಿಡದ-
ಲನುಭವಿಸಲಾಗಳ್ ತ್ರಿಕಾಲದೊಳು ಲಿಂಗಾರ್ಚನೆಯ ನೆಸಗಲಾದಳವಳು ॥
ಘನ ಹರುಷದೊಳು ನೋಡಿ ನಿರ್ಮಲನು ಪೇಳಿದನು
ತನಯೆ ಘನಲಿಂಗವನು ಪತಿಯೆಂದು ಭಾವಿಸೌ-
ವನುಪಮಿತ ಗುರುವಿನಾಜ್ಞೆಯೊಳರಿದು ಪ್ರಾಣವೆನೆ ಲಿಂಗವೆನುತರಿ ಭಾವವ ॥೧೬॥

ಜಂಗಮವನಾಗಿ ತಿಳಿ ಮೂರರಿದಭೇದದೊಳು
ಪಿಂಗದಲೆ ಪೂಜಿಸಾ ಘನವಸ್ತು ನೀನಾಗಿ
ಲಿಂಗದೊಳಗೇ ಜಗವ ಭಾವಿಸೌ ತಿಳಿಯೊರೆವೆ ಭಾವವಾತ್ಮಾಕಾಶವು ॥
ತಂಗಿ ಸುಪ್ರಾಣವೇ ವಾಯ್ವಗ್ನಿಯಾಗಿರುವ-
ವಂಗವೇಜಲಭೂಮಿಗಳ್ ತಿಳಿಯಲವೆಯಿಷ್ಟ
ಲಿಂಗರೂಪದೊಳಿಹವು ನೋಡು ನೇತ್ರಕೆ ಹೊಳೆವುದೀ ಜಗದ ಲಿಂಗಾಕೃತಿ ॥೧೭॥

ಪಂಚಸೂತ್ರಾಕಲಿತ ಘನಶಿಲಾಮೂರ್ತಿಯೊಳು
ಸಂಚಿತವ ನಾಶಿಸುತೆ ನಿನ್ನ ಚೈತನ್ಯವನೆ
ಸಂಚಯಿಸಿ ಯೋಗದಿಂ ನೆಲೆಗೊಳಿಸಿ ದೀಕ್ಷೆಯೊಳಗಿಷ್ಟನಾಮಕಲಿಂಗವ ॥
ವಂಚಿಸದೆ ನಿನಗೀಯೆ ತವಸೂತ್ರಮಂ ಪಿಡಿದು
ಲಾಂಛನವ ಧರಿಸಿ ಬಂದಾ ಗುರು ತದಿಷ್ಟಲಿಂ-
ಗಾಂಚಿತಾಕಾರನೆಂದರಿಯೌ ಮಹಾದೇವಿ ಜಲದಂತೆ ಪರಿಶುದ್ಧನು ॥ ೧೮ ॥

ಇವನಂಘ್ರಿಪೂಜೆಯಿಂದರಿವುದಾ ಲಿಂಗವನು
ತವೆಲಿಂಗದೃಷ್ಟಿಯಿಂ ತಿಳಿವುದಾ ಚೇತನವ
ಶಿವಲಿಂಗ ಚೈತನ್ಯವಾ ಜಂಗಮಂ ತಿಳಿಯಲದು ಭಕ್ತಭಾವಬಲದೆ ॥
ಶಿವಲಾಂಛನವ ಧರಿಸಿ ಸುಳಿವುದೌ ಸೂತ್ರಗೋ-
ತ್ರವ ನಿರೀಕ್ಷಿಸದೆ ಭಕ್ತಿಯ ಭಾವಕಂ ಮೆಚ್ಚಿ
ಭುವನದೊಳ್ ಸುಜ್ಞಾನಬೋಧನವ ಗೈಯುತ್ತೆ ಪವನದೋಲ್ ನಿರ್ಲಿಪ್ತವು ॥೧೯॥

ಚರನಂಘ್ರಿಯೊಳು ಲಿಂಗ ಲಿಂಗದಿಂದಾ ಗುರುವು
ಗುರುವಿನಿಂದಾಚಾರವಹುದು ತಿಳಿಯೌ ಮಗಳೆ
ವರಪವನದಿಂದಗ್ನಿಯಗ್ನಿಯಿಂದಂ ಜಲವು ಜಲದಿಂದ ಧರುಣಿಯೆಸೆದೋಲ್ ॥
ಗುರುಚರರು ದೊರೆಯದಿರೆ ಲಿಂಗದೊಳ್ ಭಾವಿಪುದು
ಚರನು ದೊರೆಯದಿರಲ್ಕೆ ಗುರುವಿನೊಳ್ ಭಾವಿಪುದು
ಚರನೋರ್ವನಿರುತಿರಲು ಸಕಲಮುವನಂಘ್ರಿಯೊಳಗುಂಟೆಂದು
ಭಾವಿಸುವದು ॥ ೨೦ ॥

ಜಂಗಮದ ಪಾದದಿಂದೊಗೆದ ಜಲಬಿಂದುವದು
ಮಂಗಲದ ತೀರ್ಥ ಕೋಟಿಗಳಿಂದೆ ಮಿಗಿಲಹುದು
ಮಂಗಲಾಂಗಿಯೆ ನೀನು ತತ್ ಸಿದ್ಧಿಗಾಗಿಯೇ ಲಿಂಗವನು ಪೂಜಿಸುವದು ॥
ತುಂಗಪಾದೋದಕದೆ ಪಾಪತಾಪಕ್ಷಯವು
ಭಂಗವಿರಹಿತ ಭೋಗಮೋಕ್ಷ ಪ್ರತಾನವದು
ಮಂಗಜಾದಿ ವಿಕಾರನಾಶನವು ಮೇಣ್ ಜನ್ಮದುಃಖ ಮೃತಿಭಯಹನನವು ॥೨೧॥

ಚರವರನ ಕರುಣಾಪ್ರಸಾದವಿದಕಾದಿಯಹ-
ದರಿಯಲದರಿಂದಖಿಲ ದುಃಖಗಳ ಹಾನಿಯಹು-
ದುರುತರಾನಂದದಮಳತೆಯಹುದು ಪಡೆದವನು ಪರಮ ಜೀವನ್ಮುಕ್ತನು ||
ಸರಸ ಕೃಪೆಯಿಂದೊರೆದುದಿತ್ತುದೊಲೆದೀಕ್ಷಿಪುದು
ನೆರೆಯಾಲಿಪುದು ಮೂಸಿಸುವದಾಸ್ವಾದಿಸುವ-
ದುರೆ ಸೋಂಕಿದುದು ನಡೆದುದಮಲ ಪ್ರಸಾದವಹುದರಿದೈದಿದವ ಧನ್ಯನು || ೨೨ ||

ಈ ಪ್ರಸಾದವು ಲಿಂಗವೆನಿಸುವದು ಭಕ್ತಂಗೆ
ಚಿತ್ರುಯೋಜಕವಾಗಿ ತಿಳಿಗಗನದೋಲ್ ಘನವ-
ದೀಪ್ರಪಂಚಕೆ ಮೂಲವಹ ಶಬ್ದಮಯವಹುದು ತಚ್ಛಬ್ದವೋಂಕಾರವು ||
ಸುಪ್ರಣವವೆನಿಸುತ್ತೆನಾದಬಿಂದು ಕಲಾತ್ಮ-
ದೋಳ್ ಪ್ರತೀತಿಯ ಪಡೆದು ಸರ್ವಸೂಕ್ಷ್ಮಾತ್ಮಂಗವನು
ಕ್ಷಿಪ್ರದಿಂ ವ್ಯಾಪಿಸುತೆ ಸತ್ಪ್ರಾಣಲಿಂಗಾಖ್ಯೆಯಂ ತಳೆದು ಶೋಭಿಸುವದು || ೨೩ ||

ಅದು ಮಹಾ ಪಂಚಾಕ್ಷರಾಖ್ಯ ಮಂತ್ರಕೆ ಮೂಲ-
ವದನು ಜಪಿಸಿ ತದರ್ಥವಹ ಮಹಾಲಿಂಗವನು
ಸದುಹೃದಯದಾದಿಯೆಂದರಿದು ಭಾವಿಪುದು ತದ್ಭಾವವೇ ಭಾವಲಿಂಗ ||
ಇದು ಹೃದಯ ಕರ್ಣಾಕ್ಷಿಚರ್ಮರಸನಾ ಘ್ರಾಣ-
ಮೃದುವಚನ ಪಾಣಿಪದ ಗುಹ್ಯ ಗುದವೆನಿಪಿಂದ್ರಿ-
ಯದಗಣವವ್ಯಾಪಿಸುತಲೆ ಮಹಾಪ್ರಸಾದ ಚರಶಿವ ಗುರುಸ್ವಾಚಾರವು || ೨೪ ||

ಇಂತು ನಾಮವ ತಳೆದು ಭಾವಸತ್ಪ್ರಾಣೇಷ್ಟ-
ಕಾಂತಲಿಂಗಾಧಾರದೊಳು ಶೋಭಿಸುವದಾ ನಿ-
ರಂತ ಸುಜ್ಞಾನಾದಿ ಶಕ್ತಿವಿಡಿದಾರಾಗಿ ಮತ್ತೆತಾನಂಗವಾಗಿ ||
ಅಂತರಿಸದಿರೆ ತ್ಯಾಗಭೋಗ ಯೋಗಾಖ್ಯೆಯೊಳ-
ನಂತೇಷ್ಟ ಸುಪ್ರಾಣ ಭಾವಲಿಂಗಾಶ್ರಯದೊ-
ಳಂತೆ ವೇದಾಂತದೋಳ್ ಸ್ಥೂಲ ಸೂಕ್ಷ್ಮ ಸುಕಾರಣಾಹ್ವಯುವದುಂಟಂಗಕೆ ||೨೫||

ಇದರೊಳಗೆ ಭಕ್ತಮಾಹೇಶ್ವರಪ್ರಸಾದಿ
ಸದಮಲ ಪ್ರಾಣಲಿಂಗಿ ಸುಶರಣ ಪರವೈಕ್ಯ-
ವೊದವಿರುವವಂಗ ಸ್ಥಲದ ಭೇದಗಳು ವೊದಲಿನದು ಲಿಂಗಸ್ಥಲಂ ॥
ಸದುಳದಿಂದರಿ ನೀನು ಸ್ಥಲವೆಂಬುದೇ ಬ್ರಹ್ಮ-
ವದರೊಳಗೆ ಲಿಂಗಸ್ಥಲಾಂಗ ಸ್ಥಲಂಗಳೆಂ-
ಬುದು ಭೇದವೆರಡಾಯ್ತು ವೀರಶೈವರ ತತ್ವವಿದು ಸುಕೃತತತ್ವವರಿಯೆ ॥ ೨೬ ॥

ಇನ್ನು ಕೇಳಾ ಮಗಳೆ ವೀರಶೈವರ ನೀತಿ-
ಯನ್ನು ಪೇಳುವೆನೆಲ್ಲ ಮತನೀತಿಯೆಂಡು ಬಗೆ
ಮನ್ನಿಸುವರಾಚಾರ ನಾಮದೊಳು ಪ್ರಾಣವೆಂದರಿದು ಪಾಲಿಸುವರಿದನು ॥
ನನ್ನಿಯಿದು ಪ್ರಾಣದಂತೈದು ಬಗೆಯಾಗಿಹುದು
ಮಾನ್ಯಳೆ ಸದಾಚಾರವರಿಯೆ ಭೃತ್ಯಾಚಾರ-
ಮುನ್ನತ ಶಿವಾಚಾರವಮಲಲಿಂಗಾಚಾರವನುಪಮ ಗಣಾಚಾರವು ॥ ೨೭ ॥

ತಿಳಿಯಹಿಂಸಾದಿಗಳೆ ನಿರ್ಮಲ ಸದಾಚಾರ-
ವಿಳೆಯ ಭಕ್ತರಿಗಾನು ಭೃತ್ಯನೆಂದರಿವುದೇ-
ಫಲಿತ ಭೃತ್ಯಾಚಾರವೀ ಜಗವ ಶಿವನೆಂದು ಬಗೆವುದೆ ಶಿವಾಚಾರವು ॥
ಮಿಳಿತಲಿಂಗವ ಬಿಟ್ಟು ಯಜಿಸೆನಾನೆಂಬುದು-
ಜ್ವಲಿತ ಲಿಂಗಾಚಾರವಿರೆ ಶೀಲದೊಳು ಭವಿಯ
ಸುಳುಹನೀಕ್ಷಿಸೆನೆಂಬುದುತ್ತಮಗಣಾಚಾರವಾಚಾರ ಲಿಂಗವಿದುವೆ ॥ ೨೮ ॥

ಗುರುಲಿಂಗ ಜಂಗಮ ಸುತೀರ್ಥ ಪ್ರಸಾದಗಳು
ವರಭೂತಿ ರುದ್ರಾಕ್ಷಿ ಪರಮ ಮಂತ್ರಂಗಳಿವು
ಮರೆಯುವಷ್ಟಾವರಣಗಳೆನಿಪ್ಪವಿದು ವೀರಶೈವ ಘನಧರ್ಮದರಿವು ॥
ಗುರುಲಿಂಗ ಜಂಗಮರೆ ಚಿರಪೂಜ್ಯರಾಗಿರುವ-
ರುರುತೀರ್ಥ ವಿಮಲ ಪ್ರಸಾದಗಳು ಫಲಗಳಹ-
ವರಿ ಭಸಿತ ರುದ್ರಾಕ್ಷಿಮಂತ್ರಗಳು ಕರಣಗಳು ಪೇಳ್ವೆನೀ ಮೂರಂರವ ॥ ೨೯ ॥

ಘನಶುದ್ಧ ಗೋಮಯದೊಳುದಿಸಿ ಗುರುಚರತೀರ್ಥ
ವಿನುತ ಮಂತ್ರಗಳಿಂದೆ ಪರಿಪೂತಮಾಗೆ ಪಾ-
ವನಭಸಿತಭೂತಿ ಭಸ್ಮಕ್ಷಾರರಕ್ಷೆಯಂಬೈದು ನಾಮವ ಧರಿಸುತೆ ॥
ಅನಘಚಿದ್ವೈಭವವನೀಯುತ್ತೆ ಭಕ್ತಜನ
ಕನುದಿನದೊಳಘರಾಶಿಯನು ದಹಿಸಿ ದುರ್ಲಿಖಿತ-
ವನು ಕ್ಷಯಿಸಿ ಭಕ್ತರನುಗ್ಗೈದು ರಕ್ಷಿಸುತಿಹ ವಿಭೂತಿಯನು ಬಿಡದೆ ಧರಿಸೌ ॥೩೦॥

ರುದ್ರನಕ್ಷಿಯ ಜಲದೊಳುದ್ಭವಿಸಿ ರುದ್ರಾಕ್ಷಿ
ಭದ್ರನಾಮವ ಪಡೆದು ಗುರುಚರೋತ್ತಮ ಪಾಣಿ-
ಪದ್ರಜದೆ ಪರಿಶುದ್ಧಯುತೆನಾಂತು ಧರಿಸಿಧವರಘವ ಕಳೆಯುತ್ತಿರುವದು ॥
ಕ್ಷುದ್ರಮಾನವರೆಲ್ಲ ಧರಿಸಿ ಯಮಕಿಂಕರರು-
ಪದ್ರವವ ನೀಗಿದರು ಧರಿಸುತ್ತೆ ನೀನವನು
ಷಡ್ರಿಪು ಮಹಾಭಯವ ಗೆಲು ಮಹಾದೇವಿ ತಿಳಿಯಿನ್ನು ಮಂತ್ರದ
ಮಹಿಮೆಯ ॥ ೩೧ ॥

ಆರು ವರ್ಣದ ಮನುವಿದೋಂಕಾರ ಬೀಜಮಿದು-
ಮಾರಧ್ವಗಳಿಗಿಂಬುವಡೆದು ಜಗದಾದಿಗಾ-
ಧಾರಮಾಗಿಹುದಿದು ಮಹಾಮಂತ್ರಪಂಕ್ತಿಗೆಲ್ಲಕ್ಕಧಿಕಮಾಗೆಸೆವುದು ॥
ಸಾರಹೃದಯಳೆ ನೀನು ಜಪಿಸಿದನು ವಾಗುಪಾಂ-
ಶುರುಮಾನಸದಿಂದಲರ್ಥವಿದಳಾ ಸಂ-
ಸಾರವಿರಹಿತ ಲಿಂಗಪತಿಯ ನಿಜನಾಮವೆಂದರಿದು ನಿನ್ನೊಳ್ ಧ್ಯಾನಿಸಿ ॥ ೩೨ ॥

ಎನಿತುಮಷ್ಟಾವರಣಮಂಗವಾಗಿಹುದು ಕೇ-
ಳನಿತು ಪಂಚಾಚಾರಗಳ್ ಪ್ರಾಣವಾಗಿಹವು
ವಿನುತ ಷಟ್ಸ್ಥಲತತ್ವಮಾತ್ಮಮಾಗಿರುವದೀಮತಪುರುಷವರನಿಗರಿಯೆ ॥
ಘನ ಭಕ್ತಿಯಿದನರಿದು ಗುರುಲಿಂಗಜಂಗಮಕೆ
ತನುಮನೋ ಧನವ ನಿರ್ವಂಚನದೆ ಕೊಟ್ಟು ಪರ-
ವನಿತೆಯರಿಗಂ ಪರರ ವಿತ್ತಕಮಪೇಕ್ಷಿಸದೆ ಮಾಹೇಶ್ವರ ಸ್ಥಲದೊಳು ॥ ೩೩ ॥

ರಾಜಿಸುವನವನೇಕೆ ಲಿಂಗನಿಷ್ಠಾಪರನು-
ತೇಜದಿಂ ಕರುಣಾತ್ಮನಾಗಿ ನಿಜಗುರ್ವಾಜ್ಞೆ-
ಯೋಜದಿಂದಂ ಷಡರ್ಥಂಗಳಂ ಸಂಗ್ರಹಿಸಿ ಪ್ರಾಸಾದಿಕ ಸ್ಥಲವನು ॥
ನೈಜದಿಂದೇರುತ್ತೆ ಸರ್ವವ ಸಮರ್ಪಿಸುತ-
ಲಾ ಜಂಗಮವೆ ಲಿಂಗಮುಖವೆಂದು ತತ್ಪ್ರಸಾ-
ದೌಜಸವ ಪಡೆದು ಭೋಗಿಸುತೆ ಮತ್ತೈದುವನು ಪ್ರಾಣಲಿಂಗಿಯ ಪದವನು ॥೩೪॥

ಅಲ್ಲಿ ತ್ರಿಮಲಾತೀತನಾಗಿ ನಿರ್ವಾಣಪದ-
ದುಲ್ಲಸಿತ ಚಿದ್ಬೋಧಮಂ ಗುರುವಿನಿಂ ಪಡೆದು
ಲಲ್ಲೆಯಿಂ ಪ್ರಾಣದುರಲಿಂಗದಾಸ್ಥಿತಿ ಸಮಂಜಸಮಾಗೆ ಪ್ರಾಣವೆಲ್ಲ ॥
ಸಲ್ಲಿಂಗಮಾಗಲಾ ಸುಖವಡೆದು ಶರಣಪದ-
ಕಲ್ಲಿಂದೆ ನೆಗೆದು ಸರ್ವೇಂದ್ರಿಯದ ಸೊಗವನಾಂ-
ತಿಲ್ಲಿಯರಿಯುತೆ ಲಿಂಗವೇ ಪತಿಯು ಸತಿಯು ತಾನೆಂಬ ಭಾವಂ ಬಲಿಯಲು ॥೩೫॥

ಜ್ಞಾನಪರಿಣಾಮ ಪರಮಾನುಭವದೊಳಗಿರ್ದು
ನಾನು ನೀನದಿದೆಂಬ ಭೇದಗಳನೆತಿಗಳೆದು
ತಾನೆ ಲಿಂಗವದಾಗಿ ಲಿಂಗವೇ ತಾನಾಗಿ ಮೆರೆವನೈಕ್ಯಸ್ಥಲದೊಳು ॥
ಜ್ಞಾನಿಗಳು ಪೇಳುವರು ಭಕ್ತಿಯೇ ಘನಸುಖ
ಸ್ಥಾನವೆಂದನುಭವಿಸುತಾ ಭಕ್ತಿಯೇ ಶಕ್ತಿ
ಮಾನದಿಂ ಲಿಂಗವೆನಿಸುವದಿದುವೆ ಶ್ರದ್ಧಾದಿಯಿಂದಂಗಪದವ ರಚಿಸಿ ॥ ೩೬ ॥

ಮೆರೆವುದಾ ಭಕ್ತಿಯಾ ಭಕ್ತಿಮಹಿಮೆಯ ನೀನು
ನಿರುತಮೆನ್ನಿಂ ಗುರುವಿನಿಂ ಕೇಳಿ ತಿಳಿದಿರುವೆ-
ಯೊರೆದ ತತ್ವವು ನಿನಗೆ ಫಲಿಸಬೇಕಾದೊಡಂ ಭಕ್ತಿಯೇ ಬೇಕು ಮೊದಲು ॥
ಹರಭಕ್ತಿಯುಳ್ಳವರು ಹರನಿಂದಲಧಿಕರಹ-
ರರಿಯೆ ಮದ್ಭಕ್ತ ಏವಾಧಿಕೋ ಮಮಯೆಂದು
ಪರತರ ಶೃತಿಯಲ್ಲಿ ಶಿವನಾಜ್ಞೆಯಿರ್ಪುದಾ ಮರೆಯದಲೆ ಭಕ್ತಳಾಗು ॥ ೩೭ ॥

ಆಗ ಪಿತನಿಂತೊರೆಯೆ ಲಾಲಿಸಿ ಮಹಾದೇವಿ
ಬಾಗಿ ಸದ್ಭಕ್ತಿಯಿಂ ನೆನೆದೊರೆದ ಸಿಷಯವನು
ರಾಗದಿಂ ಮಾತೆಯೊಳು ಚರ್ಚಿಸಲ್ ತೊಡಗಿದಳು ತದನುಸಂಧಾನಕೊಲಿದು ||
ಆಗಳಿವಳಾಸ್ಥಿತಿಯನೀಕ್ಷಿಸಿದ ಜನರೆಲ್ಲ
ಯೋಗಿನಿಯೆಯಿವಳೆಂದು ನಂಬಲಾದರು ಭಕ್ತ-
ರಾಗ ಸದ್ಧರ್ಮ ಸನ್ನೀತಿತತ್ತ್ವಗಳನ್ನು ತಿಳಿಯಲಾಗಿಹರು ಸಿರುತ || ೩೮ ||

ಅಕ್ಕನೆಂದೆಲ್ಲರಿವಳಂ ಕರೆಯತೊಡಗಿದರು
ಚಿಕ್ಕವಳನೆಂದಿವಳನಾರಲಕ್ಷಿಸಲಿಲ್ಲ-
ಮಕ್ಕರತೆಯವಳಾಗಿ ಸರ್ವರಂ ಮನ್ನಿಸುತೆ ತಾಯ್ತಂದೆಗಳ ಸೇವಿಸಿ ||
ಚೊಕ್ಕಟದೆ ಸಮ ಬಿಲ್ವಗಳ ತಂದು ಲಿಂಗವನು-
ಮಿಕ್ಕಿಪೂಜಿಸುತಿರ್ದಳಹುದೆನಲು ಬಲ್ಲವರು
ತಕ್ಕವೇಳೆಯೊಳೋದುತಿಹಳಾಗಳೆಸೆದಿರ್ಪ ಬಸವಾದಿಗಳ ವಚನವ || ೩೯ ||

ಪಿತನಾಜ್ಞೆಯಂತೆ ಗುರುಚೆನ್ನಮಲ್ಲಾರ್ಯನಂ-
ನುತಿಸತೊಡಗಿದಳವಳು ಸೊಲ್ಲು ಸೊಲ್ಲಿಗೆ ಬಿಡದೆ
ಹಿತದಿಂದೆ ಲಿಂಗಕ್ಕೆ ಗುರುನಾಮವಿಟ್ಟಳ್ತಿಯಿಂ ಭಜಿಸುವಳ್ ಬೆರೆಯುತ ||
ಸತತಮಾಲಿಂಗವನೆ ಗುರುವೆಂದು ಭಾವಿಪಳು-
ಮಿತ ಯತ್ನದಿಂ ಜಗವ ಲಿಂಗವೆಂದರಿಯುವಳ-
ಯತಚಿತ್ತದಿಂ ಜಂಗಮಾನುಸಂಧಾನಕ್ಕೆ ದೃಢದೆ ಯತ್ನಿಸಲಾದಳು || ೪೦ ||

ಶಿವಶರಣವಚನಶಾಸ್ತ್ರವನೋದಿ ತಿಳಿದು ತಾ-
ನವುಗಳಂತಿರೆ ವಚನಗಳ ರಚಿಸತೊಡಗಿದಳು
ನವಭಾವಗರ್ಭಿತಮದಾಗಿ ಶೋಭಿಸಲಾಗಿ ಭಕ್ತರಾಲಿಸಿ ನಯದೊಳು ||
ಅವುಗಳನು ಬರೆದುಕೊಂಡೋದಲಾದರು ಬಿಡದ-
ಲವನರ್ಥ ಸಹವಾಗಿ ಕಲಿತು ತತ್ತ್ವವನರಿದು
ಕವಯಿತ್ರಿಯಿವಳೆಂದು ನುತಿಸಲಾದರು ಮಹಾದೇವಿಯಕ್ಕನ ಸುಕೃತವ ||೪೧||

ನಗಳು ಕೆಲೆಯುಳು ಹರಟೆಯೊಳು ಹೊತ್ತುಗಳೆಯುಳಾ-
ಮೃಗನಯನೆ ಮರೆದೊಡುಂ ತನ್ನತಾ ಬಣ್ಣಿಸಳು
ಬಗೆಯೊಳಾದೊಡಮಿದಿರ ಹಳಿಯಳವಳಾತ್ಮಸ್ತುತಿಯನು ಕೇಳಿ ಸಹಿಸಳೆಂದು ॥
ಬಗೆಗೆಡದಲಿಹಳಸೂಯಿಸದಿಹಳು ಕೋಪಿಸಳು
ಕುಗುಣಗಳನತಿಗಳೆದು ಹೊರಗೊಳಗುವೊಂದಾಗಿ
ಪಗಲಿರುಳು ಧ್ಯಾನಿಸಿ ಮಹಾದೇವಿ ದುರ್ಜನವ್ರಾತಕಿನಿತಗಿಯದಿಹಳು ॥ ೪೨ ॥

ಒಂದುದಿನವೆಲ್ಲ ಪೆಣ್ಮಕ್ಕಳೊಂದಾಗಿ ನೆರೆ-
ದೆಂದಿನಂದದೆ ಮಹಾದೇವಿಯಕ್ಕನ ಬಳಿಗೆ
ಬಂದು ಕೈಮುಗಿಯುತಿರಲಕ್ಕನೇಳ್ದಾಗ ನೀವೇಕೆ ಕೈಮುಗಿವಿರವ್ವಾ ॥
ಕಂದುಗೊರಲನ ಭಕ್ತರಾದ ನೀವೆಲ್ಲರೆನ-
ಗಿಂದುವಶೌಳಿಯ ಸಮರು ನಿಮಗಿಂ ಪಿರಿಯರಿ-
ಲ್ಲೆಂದು ಕೈಮುಗಿದು ತಲೆವಾಗಿ ನಿಮ್ಮಯದರ್ಶನದೊಳೆ ಕೃತಕೃತ್ಯಳೆನುತ ॥೪೩॥

ಕುಳ್ಳಿರಲು ನಯದಿಂದೆ ನಾರಿಯರು ನುಡಿದರಿಂ-
ತೊಳ್ಳಿತಾಯಿತು ನಮಗೆ ಪಿರಿಯರೆಂದೊಡೆ ನಿಮಗೆ
ಬಳ್ಳಿಮರಗಳದೇನು ತಪ್ಪುಗೈದಿರುವವೌ ಪಿರಿಯತನವಿಲ್ಲ ವಯದೆ ॥
ಸುಳ್ಳಲ್ಲಜ್ಞಾನದೊಳ್ ಪಿರಿಯತನವಿಹುದೆಂದು
ವೊಳ್ಳಿದರು ಪೇಳುತಿಹರಕ್ಕ ನೀನೆಮಗಿಂದು
ಒಳ್ಳಿಯದೆನಿಪ್ಪೊಂದುಪಾಯವನು ತೋರಿಸೌ ದೇವರನು ತಿಳಿಯಲೀಗ ॥ ೪೪ ॥

ಅಮ್ಮಗಳೆ ನಾನಾವ ಬಲ್ಲಿದಳು ಪರಿಕಿಸಲು
ಸುಮ್ಮನೇ ಕೇಳುವಿರಿ ತಿಳಿದನಿತನೊಪ್ಪಿಸುವೆ
ನೆಮ್ಮಿ ನೆಲದಡಿಯ ನಿಧಿಯಂತೆ ಶಿಲೆಯಡಿಯ ಹೇಮದೊಲು ಫಲದೆಡೆಯ ರುಚಿಯೋಲ್ ॥
ಸೊಮ್ಮಿಭಾವದ ಮರೆಯು ಬ್ರಹ್ಮವಾಗಿರುತಿರುವ
ನಮ್ಮ ಘನ ಚೆನ್ನಮಲ್ಲನ ನಿಲವನರಿಯಲರಿ-
ದೊಮ್ಮನದೆ ಭಕ್ತಿಯನೆ ಸಾಧಿಪುದು ಭಕ್ತಿಗಮ್ಯಂ ಪರಂ ತತ್ತ್ವಮೆಂದು ॥ ೪೫ ॥

ಸಾರುತಿಹ ವೇದದಾಮರ್ಮವನು ತಿಳಿಯಿರೌ
ಸಾರಭಕ್ತಿಯೆ ಶಿವನನೆಳೆತರುವ ಸೇವಕಳು
ವೀರಭಕ್ತಿಯೆ ಮುಕ್ತಿಯಂಗನೆಯ ದರ್ಪಣವು ಕಾಮ್ಯವೀಯುವ ಸುರಭಿಯು ||
ವೀರದರಿಯಿರಿ ಭಕ್ತಿಯೆಂಬುದೀಶಪ್ರೇಮ
ವೀರತನದಿಂಚರಿಸಿ ಪಡೆಯಿರಿಷ್ಟಾರ್ಥವನು
ತೋರುವನು ನಿಮಗಿದರ ಮಹಿಮೆಯನು ಕಥೆಯನೊಂದನು ಪೇಳ್ವೆ
ಸಂತೈಸುತಾ || ೪೬ ||

ಕೇಳಿ ಕೊಳೂರೆಂಬ ಗ್ರಾಮದೊಳು ಮೆರೆವುದು ವಿ-
ಶಾಲ ಯಶದೊಳು ಕಲ್ಲಿನಾಥಾಖ್ಯ ಶಿವಲಿಂಗ
ಮೇಳೈಸಿ ಭಜಿಸುವರನೇಕಭಕ್ತರುಮವರೊಳುತ್ತಮನು ಶಿವದೇವನು
ಭಾಳಾಕ್ಷನಂ ಯಜಿಸಿ ಕ್ಷೀರಾರ್ಪಣಂ ಗೈದು
ಲೀಲೆಯಿಂ ತತ್ಪ್ರಸಾದವ ಕೊಳ್ವವ್ರತವಿದನು
ಶೀಲಮೆನೆ ನಡಿಸಿಕೊಂಡಿರುತಿರ್ದನೊಂದುದಿನನುವನು ಯಾತ್ರೆಗೆ
ತೆರಳಲು || ೪೭ ||

ಪೋಪ ಸಮಯದೆ ತನ್ನಯೆಂಟು ವರ್ಷದ ಮಗಳ-
ನೊಲ್ಪಿನಿಂ ಕರೆದವ್ವ ಸೀನೆನ್ನ ಸುವ್ರತವ
ಸೊಪ್ಪಿನಿಂ ನಡಿಸಾನು ಮೂರುದಿನದೊಳು ಬರ್ಪೆ ವ್ರತವೆನಗೆ ಪ್ರಾಣವೆಂದು ||
ಆ ಪಿತನು ನಿರ್ವಹಿಸಿ ಪೋಗಲಾ ಚನ್ನವ್ವೆ
ಲೋಪವಿಲ್ಲದೆ ಮರುದಿನದೊಳೊಲೆಯ ಸಾರಿಸುತ-
ಲಾಪವಿತ್ರಳು ಜಳಕವೆಸಗುತ್ತೆ ಮಡಿಯುಟ್ಟುಪಾಲ್ಕಾಸಿಕೊಂಡಾಗಳೆ || ೪೮ ||

ಬಂದು ಗುಡಿಯೊಳು ಶಿವನ ಮುಂದೆ ಪಾಲ್ಬಟ್ಟಲವ
ನಂದದಿಂದಿಟ್ಟವಳು ಜನಕನಾ ನೈವೇದ್ಯ –
ದಂದವನು ತಿಳಿಯದಲೆ ದೇವರಿದಿರೊಳು ನಿಂದು ಬೇಡಿದಳು ಪಾಲ್ಗುಡಿಯಲು ||
ಕಂದುಗೊರಲನು ಕುಡಿಯದಿರಲಾಗ ಕೈಮುಗಿದು
ಕುಂದರದನೆಯು ಮಿಡುಕಿ ಪಾರ್ಥಿಸಿದಳೆಂತೆನೆಲು
ತಂದೆ ತಡಮಾಡದಿರು ಪಾಲಾರುಚಿಪುದದನು ಕುಡಿಯೆ ರುಚಿಯೆನಿಸದಯ್ಯಾ ||೪೯||

ಪೊಸಬಳೆಂದಿಂತು ನಾಚಿವಿಯೇನು ಪೋಪೆನಾ-
ನೊಸೆದು ಕುಡಿಯಯ್ಯ ಯೆಂದವಳು ಮರೆಯೊಳುನಿಂದು
ಒಸೆದು ಬಂದೀಕ್ಷಿಸುತೆ ಬಾಲೆಯವಗೆಂದಳಯ್ಯ ಪಾಲ್‌ಗುಡಿಯೆಯೇಕೆ ನೀನು ॥
ನಸುಗಾಯ್ದುದ್ದೋ ಪಾಲು ಕೆಟ್ಟಿರುವದೋ ಮೇಲೆ
ಮಿಸುಪ ಸಕ್ಕರೆಯು ಬೇಕಾಗಿಹುದೊ ಮಾತಾಡು
ಎಸೆವ ಕರಚೀಕಾಯಿ ಸುರುಳಿಪೋಳಿಗೆಯ ತರಲೇನು ಪೇಳಯ್ಯ ಬೇಗ ॥ ೫೦ ॥

ಕಾಡದಿರು ದೇವ ತಂದೆಯ ವ್ರತವ ಕೆಡಿಸದಿರು
ನೋಡುನೀಂ ಕುಡಿಯದಿರೆ ತಂದೆ ಕೋಪಿಸುವನೈ
ಬೇಡಬಿಡು ಹಟವ ಜನಕಂ ಯಾತ್ರೆಯಿಂ ಬರಲು ತರುವೆನು ಫಲಾಹಾರವ ॥
ಕಾಡುವದೆ ನಿಜವಾದೊಡಪರಾಧಿ ನೀನಾಗಿ
ನಾಡೆ ಶಿಕ್ಷೆಗೆ ಪಾತ್ರನಾಗುವೆ ವಿಚಾರಿಸೆಂ-
ದಾಡಲಾ ಮೆಲ್ನುಡಿಯ ಕೇಳಿ ಪರಮಾತ್ಮನಿಗೆ ಪಾಲಿಗಿಂ ನುಡಿಸೊಗಸಿತು ॥೫೧॥

ಇಂತು ಶಿವನಾನಂದದೊಳಗಿರಲು ಚೆನ್ನಮ್ಮ-
ನಂತರಂಗವ ದುಃಖವಾವರಿಸಿ ನಿಲದೆ ರೂ-
ಪಾಂತು ಹೊರಹೊಮ್ಮುತಿರಲವಳು ತನ್ನಿಂದೆ ಪಿತನೀವ್ರತವು ಕೆಟ್ಟಿತೆಂದು
ಚಿಂತಿಸುತೆ ಕಳವಳಿಸಿ ಪ್ರಾಣಾರ್ಪಣಕ್ಕಾಗಿ
ಯಂತು ನಿಶ್ಚೈಸಿ ಕಂಬಕ್ಕೆ ತಲೆಯಪ್ಪಳಿಸೆ
ಕಂತುಮರ್ದನ ನೋಡಿ ಬಂದವಳನೆತ್ತಿ ಪಿಡಿಯುತ್ತೆ ಪಾಲಂ ಕುಡಿದನು ॥ ೫೨ ॥

ಕುಡಿಯೆ ಬಟ್ಟಲವ ಕೊಂಡೋಡಿದಳು ಮನೆಗಿರದೆ
ಮೃಡನಿವನೊಳಾಂ ವರವ ಪಡಿಯವೇಳ್ಕೆನಲಿಲ್ಲ
ದೃಢ ಹರುಷದಿಂ ಶಿವನು ವರವೀಯೆ ತಾನಾಗಿ ಕರೆದೊಡುಂ ನಿರ್ಲಕ್ಷಿಸಿ ॥
ಒಡನಿತ್ತಲವಳು ಬರಿ ಹರನತ್ತಲೈದಿದನು
ಸಡಗರದೊಳಿಂತೆರಡು ದಿವಸಗಳು ಗತಿಸುತಿರೆ
ತಡೆಯುದಲೆ ಪಿತನಾಗ ಮನೆಯ ಬಳಿಗೈದಿಸಲು ಗುಡಿಯಿಂದ ಬರಲುಬಾಲೆ ॥೫೩॥

ನೋಡಿ ಪಿತನಾಗ ಸಿಡಿಮಿಡಿಗೊಳ್ಳುತೆ ಯೇನು-
ಮಾಡಿದೆ ಪ್ರಸಾದವನು ಚಲ್ಲಿದೆಯೋ ಕುಡಿದೆಯೋ
ಕೂಡಿದಾ ಗೆಳತಿಯರಿಗಿತ್ತೆಯೋ ಬಿಕ್ಕಿಗಿಕ್ಕಿರುವೆಯೋ ಪೇಳೆನ್ನುತ ||
ನಾಡೆ ಗದ್ದರಿಸಲಾಬಾಲೆ ಧೈರ್ಯದಿ ಮಾತ-
ನಾಡಿದಳು ಸತ್ಯವನು ಕೇಳಿ ಶಿವದೇವನುರಿ-
ದಾಡಿದನೆಲೇ ದುಷ್ಟೆ ಸುಳ್ಳನೇಕೊರೆವೆ ನೀನೆನ್ನ ವ್ರತಮುಂ ಕೆಡಿಸಿದೆ || ೫೪ ||

ಕುಳಿತು ದ್ವಾದಶವರುಷಪರಿಯಂತಮುಂ ಮಾಳ್ಪ-
ಮಳಿನ ತಪಕೊಲಿಯದೀಶ್ವರ ನಿನಗದೆಂತೊಲಿದು
ಬಳಿಗೈದಿ ಪಾಲನಿರದೀಂಟಿದಂ ಸಟೆಯಾಡಿ ಕುಲದ ಮಾನವ ಕಳೆದೆಯಾ ||
ಒಳಿತಾಯ್ತು ನೀನೆನಗೆ ಮುಖವ ತೋರದಿರೆನಲು
ನಳಿನಾಕ್ಷಿ ಮತ್ತೊರೆದಳಯ್ಯ ಸಟೆಯಲ್ಲ ನಡಿ-
ತಿಳಿಯಲ್ಕೆ ನಾಳೆಗಾನೇ ಪಾಲ ಕುಡಿಸುವೆನದಾಗದಿರೆ ತವ ಶಿಕ್ಷೆಗೆ || ೫೫ ||

ಪಾತ್ರಳಾಗುವೆನೆನಲು ತಂದೆ ಸಿಡಿಮಿಡಿಗೊಂಡು
ಗಾತ್ರವನೆ ಭೇದಿಸುವೆ ನೀಂ ಪಾಲ ಕುಡಿಸದಿರೆ
ವಕ್ತ್ರದಿಂ ಸಟೆಯಾಡಿ ಹಸ್ತದೊಳುಕೃತಿಗೈದು ಮತ್ತದನೆ ಸಾಧಿಸುವೆಯಾ ||
ಪುತ್ರಿಯೇ ನೀನಲ್ಲ ನಿಶ್ಚಿತವು ಮಮ ಜನ್ಮ-
ಶತೃವಾಗಿರುವೆ ನೀನೆಂದೆನುತೆ ಬಳಲುತಾ-
ರಾತ್ರಿಯನು ಕಳೆದನುಮ್ಮಳದೆ ತತ್ತರಿಸುತ್ತೆ ಕರ್ತವ್ಯಮಂ ನೆನೆಯುತ || ೫೬ ||

ಶರಣೆಗಾಯಿರುಳಲ್ಲಿ ನಿದ್ರೆಯೆಳ್ಳನಿತಿಲ್ಲ-
ಮರಿಯದಲೆ ಪಿತನಿನಿತು ಬಯ್ದೊಡುಂ ತನ್ನಿಂದ
ಹರನ ತೃಪ್ತಿಗೆ ಭಂಗವಿಲ್ಲೆಂದು ಹಿಗ್ಗುವಳು ಮತ್ತೆ ಮುಂದೇಂ ಮಾಳ್ಪನೋ ||
ಪರಮಾತ್ಮನೆಂದೆನುತೆ ಮರುಮರುಗಿ ತಗ್ಗುವಳು
ಪರಮ ಭಕ್ತಳ ಹಿಗ್ಗು ತಗ್ಗುಗಳ ಕಾಳಗವ
ನೆರೆ ನೋಡಲಮ್ಮದಲೆ ತಾಮಸಿಯು ಧಾವಿಸಿದಳೋಯೆನಲು ಬೆಳಗಾಯಿತು ||೫೭||

ಆಗಳಾ ಸದ್ಭಕ್ತೆಯೇಳ್ದು ಮನೆಗೆಲಸಗಳ
ವೇಗದಿಂಗೈದು ಪಾಲ್ಗರೆಯುತಂ ಕಾಸಿ ಮಡಿ-
ಯಾಗಿ ಕ್ಷೀರವಕೊಂಡು ಕಲ್ಲೇಶನಂ ನೆನೆದು ನಡೆದಳಾ ಬಾಲೆ ಗುಡಿಗೆ ||
ಜಾಗರೂಕತೆಯಿಂದೆ ಶಿವದೇವನೀಕ್ಷಿಸುತೆ
ಸಾಗಿದನು ಕೈಯೊಳಗೆ ಖಡ್ಗವನೆ ಧರಿಸುತ್ತೆ
ಲೋಗರಿವರೀರ್ವರನು ನೋಡಿ ಬೆರಗಾಗಿ ತಿಳಿಯಲ್ಕೆ ಹಿಂಬಾಲಿಸಿದರು || ೫೮ ||

ಆ ಮುಗ್ಧಭಕ್ತೆ ಗುಡಿಗೈತಂದು ಬಟ್ಟಲವ
ಪ್ರೇಮದಿಂದಿಟ್ಟು ಕೈಮುಗಿದು ಬಗೆಬಗೆಯಿಂದೆ
ಸೋಮನಂ ಪ್ರಾರ್ಥಿಸಿದೊಡುಂ ದಯೆಯ ತೋರದಿರಲ್ಕೆ ತತ್ಪಿತನು ಕೋಪದಿಂದ ||
ಆ ಮಗಳ ಸಂಹರಿಸಲೆಂದು ಖಡ್ಗವನೆತ್ತೆ
ಕೋಮಲಾಂಗಿಯು ನೋಡಿ ಜನಕನಾರ್ಭಟಕಗಿದು-
ಸೋಮಲಿಂಗನ ಸುತ್ತುವರಿಯುತ್ತೆ ಶಿವಶಿವಾಯೆನುತಪ್ಪಿದಳು ಲಿಂಗವ || ೫೯ ||

ಕೋಪದಿಂದೆಳೆಯಲಾ ಶಿವದೇವನುಜ್ಜುಗಿಸೆ
ಪಾಪವಿರಹಿತ ಲಿಂಗಮುಂ ದ್ವಿಭಾಗವದಾಗು-
ತಾಪುನೀತೆಯ ಕೊಂಡು ಬಳಿಕ ಮೊದಲಂತಾಯಿತೆಲ್ಲರಚ್ಚರಿವಡೆಯಲು ||
ತಾಪದಿಂ ಶಿವದೇವನುರೆ ಸೊಬಬಿ ಪಂಬಲಿಸಿ
ಪಾಪಿಯಾನಾದೆನೆಂದವನು ಸಲೆ ಮರುಗುತಿರ-
ಲಾ ಪಿನಾಕಿಯು ಸ್ವಪ್ನದೊಳಗೈದಿ ತದ್ಭಕ್ತಿಯನೆ ಬೋಧಿಸುತೆ ಪೊರೆದನು ||೬೦||

ಇದೆ ಭಕ್ತಿ ಪರಿಣಾಮವೆಮ್ಮ ಭಾವದೊಳಾಗಿ
ಸದಮಳಿನ ದೈವಕಳೆಯನ್ನು ಜಾಗ್ರತಗೊಳಿಸ-
ಲಿದು ಸಾಧನಂ ಜ್ಞಾನವೈರಾಗ್ಯಗಳಿಗಾದಿದನು ತಿಳಿವುದೆನಲು ||
ಪದುಳದಿಂದೆಲ್ಲರಾನಂದತುಂದಿಲರಾಗಿ
ಹೃದಯದಿಂ ಕೊಂಡಾಡಿ ತಮ್ಮ ತಮ್ಮಾಲಯಕೆ
ನುದದೆ ಪೋಗಲ್ಕಿತ್ತಲಾ ಮಹಾದೇವಿ ಲಿಂಗಾರ್ಚನಾಪರಳಾಪಳು || ೬೧ ||

ಗುರು ಕುಮಾರೇಶಕರುಣೆಯ ಪಡೆದ ಪಂಚಾಕ್ಷ-
ರುರಚಿರಾಖ್ಯನ ಕೃಪಾಛತ್ರದೊಳಗಿದ್ದು ಶ್ರಮ-
ವೆರಸುಭಯಗಾನ ಸದ್ವಾದನ ಸುಗೀರ್ವಾಣ ಕರ್ನಾಟ ಭಾರತೋಕ್ತಿ ||
ಪರಮ ಸಾಹಿತ್ಯಮಂ ಕಲಿತು ಜನ್ಮಾಂಧನೆನಿ-
ಸಿರುವ ಪುಟ್ಟಾರ್ಯಕವಿಯೊರೆದಕ್ಕಮಾದೇವಿ-
ಯುರುಪುರಾಣದೊಳೊಂದನೆಯ ಕಾಂಡಮದು ಮುಗಿದುದಾ
ಚರರು ನಲಿಯಲು || ೬ ||

ಅಂತು ಸಂಧಿ ಮೂರಕ್ಕಂ ಪದಗಳು ೧೪೩ ಕ್ಕಂ ಶುಭಂ

|| ಶ್ರೀಗುರು ಸಿದ್ಧಲಿಂಗಾಯ ನಮಃ ||

# ಶ್ರೀಅಕ್ಕಮಹಾದೇವೀ ಪುರಾಣಂ

## ೪ ನೇ ಸಂಧಿ

**ಸೂಚನೆ—** ಆ ಮಹಾದೇವಿಯಕ್ಕನ ಭಕ್ತಿ ಸುಜ್ಞಾನ
ಭೂಮಿಕೆಯ ವರ್ಣಿಸುತೆ ವೈರಾಗ್ಯಮೂಲವನು
ರಾಮಣೀಯಕವಾಗೆ ಸದ್ಭಕ್ತಜಾಲಕ್ಕೆ ಪೇಳ್ವೆನೀ ಸಂಧಿಯೊಳಗೆ||

ಸಿದ್ಧನಾನಾದೆನುರಿಗಣ್ಣ ಪಡೆದಿರುವೆ
ಸಿದ್ಧಿಗಳ ಬಳಗವೆನ್ನೊಳಗುಂಟು ಶಿವಸಭೆಯ
ಸಾಧ್ಯತೆಯುಮೆನಗಹುದು ನಾನೆಭೂರುದ್ರನೆಂದರಿದಹಂಕರಿಸುತೆ ಸದಾ ||
ಬುದ್ಧಿಯಿಂದಿಳೆಯಲ್ಲಿ ಕೆರೆಭಾವಿಗುಡಿಗಳನು
ವೃದ್ಧಿಗೈಯುತೆ ಬಿಡವೆ ವಿಖ್ಯಾತನಾದ ತತ್-
ಸಿದ್ಧರಾಮಗೆ ಲಿಂಗತತ್ತ್ವವನು ಬೋಧಿಸಿದ ಪ್ರಭುವಿನಡಿಯಿರ್ಕೆನ್ನೊಳು ||೧||

ಮೆರೆಯುವಷ್ಟಾವರಣವೆನಿಪಂಗಕುರುಭಕ್ತಿ-
ಯಿರಲು ಲಾವಣ್ಯಮಾಗೆಸೆವ ಪಂಚಾಚಾರ-
ಮುರುತರಪ್ರಾಣವಾಗೆಸೆಯಲಮಲಜ್ಞಾನವರಿಯೆ ಜೌವನವಾಯಿತು ||
ಸರಸಮುಖಕಾಂತಿ ತೀವಿಹುದು ಕಂಗಳ ಶೋಭೆ
ಮಿರುಗಿಹುದು ಪಣೆಯು ಸೊಗಕೆಣೆಯಾಯ್ತು ಕೇಶಪಾ-
ಶರುಚಿ ವಿಸ್ತರಮಾಯ್ತು ಮೈವಣ್ಣವಿನಿದಾಯ್ತು ತನ್ಮಮಹಾದೇವಿಗರಿಯ || ೨ ||

ಭುವನದೊಳಗಿರ್ಪ ಸುಕುಮಾರಿಯರ ಮೊಗದೊಗರ
ಪವಣಿಂದೆ ಸಂಗ್ರಹಿಸಿ ಸೃಷ್ಟಿಸಿಹನೋ ಬಿದಿಯೆ-
ನುವೊಲೊಪ್ಪಿಹುದು ಸಾಧ್ವಿಯಂಘ್ರಿಯುಗಲಂ ನೋಳ್ಪ ಜನರ ಕಣ್ಬಾಗೆಗೊಳ್ಳುತ ||
ತಲೆಯತಾರ್ಕಿಕ ತೇಜವಿಹುದು ತನ್ನೊಳಗೆಂದು
ತವಕದಿಂ ಸೂಚಿಪುದೊ ಯೆನಲಾನಖದ್ಯುತಿಯು
ನವರತ್ನದೀಪಿಕೆಯುಪಳಿದು ಶೋಭಿಪುದು ತತ್ಪದದಿರವನೇವೇಳ್ವೆನು || ೩ ||

ಬಾಳೆಯ ಸ್ತಂಭವದು ತನಗೆ ಹೋಲುವದೆಂತು
ಬಾಳೆಯೆಂಬುವ ನಾಮವಿರಲಳಿವುದಾ ಗಿಡವು
ಲೀಲೆಯಿಂದಾನೆನ್ನ ತೊಡೆಯೆಂಬ ಪೆಸರರಿದು ಪಾಪಮಂ ತೊಡೆನೆಂದಿಗೂ ||
ಬಾಲೆಯುರು ನೋಳ್ಪಂತೆ ಶ್ರೀಗಿರಿಯನೈದಿನಿಯ-
ಗೋಲಯಿಪ ಸೂರುನಾಮಕ್ಕೆ ಸಲ್ಲುವೆನೆಂದು
ಹೋಲಿಕೆಯ ಮಾರುತಾ ಶರಣೆಯುತ್ಸಂಗಯುಗ್ಮಂ ಕರಂ ಶೋಭಿಸುವದು ||೪||

ನಾರಿಯರ ಕಟಿಗುಪಮಿಪರು ಸಿಂಹಮಧ್ಯವನು
ಗೌರಿಗದು ವಾಹನಂ ನಾನಾವಳ ಸಾತ್ವಿಕದ
ಸಾರಮಂ ಪೊತ್ತಿರುವೆನೆನಗೇಕೆ ತತ್ಸಾಮ್ಯಮೆಂದೆನುತೆ ಮೆರೆಯುವಂತೆ ||
ಪಾರವಿಲ್ಲದ ಸೊಬಗನೊಳಕೊಳ್ಳುತವಳನಡು-
ಸೂರಿಗಳ ಮನವೊಲಿಸಿ ಸಿಂಗರದ ಖನಿಯೆನಿಸಿ
ಭೂರಿ ಶೋಭೆಯೊಳೊಪ್ಪಿ ನಲಿವುದೆನ್ನಣುರಸನೆಯದನೇನು ಬಣ್ಣಿಸುವದು ||೫||

ಲೌಕಿಕ ಸ್ತ್ರೀಯುದರದಂತೆ ಮಾತ್ಸರ್ಯಾದ್ಯ-
ನೇಕ ದುರ್ಗುಣಗಳಿಗೆ ನಾನಿಂಬನಿತ್ತಿಲ್ಲ
ಶೋಕ ಚಿಂತೆಗಳ ಸುಳುವಿನಿತುಮೆನ್ನೊಳಗಿಲ್ಲ ಗೌರವದೊಳುಂಟವೆಲ್ಲ ||
ಸಾಕು ತನಗಿನಿತು ಬೇಡಾಪಿರಿಮೆಯಾಶೆಯುಂ-
ದಾ ಕುವರಿಯೊಡಲದುರೆ ಬಡತನವ ತಾಳಲ್ಕೆ-
ಲೋಕಮಚ್ಚರಿವಡೆಯಲಾ ಕಾಲದೊಳು ಬಗೆಗೆ ತೆಳ್ಪಸಿರು ಚಲ್ವಾಯಿತು |೬||

ನಾವು ಮಿಗೆಮೂಡಿದೊಡೆ ಜನದ ವಿಕೃತಿಯ ಪೆರ್ಚಿ
ದೇವಿಯುಡುಕೋಸಕ್ಕೆ ಪಾತ್ರರೆನಿಸುವೆವೆಂದು-
ತಾವು ಬೆದಬೆದರುತ್ತೆ ಮೂಡಲಾದವೊಯೆನಲ್ಕೊಪ್ಪಿ ಬರುವಾ ಕುಚಗಳು ||
ಪಾವನ ಸುಹೃದಯದೊಳು ನಿಷ್ಕಾಮವನು ದುಷ್ಟ-
ಭಾವದೊಳು ಸತ್ಕಾಮವನು ಮೂಡಿಸುತೆ ಕಣ್ಗೆ
ನೋಯಿಸದಲೆಸೆದವು ಮಹಾದೇವಿಗಂಜದವರಾರೀ ಜಗತ್ರಯದೊಳು || ೭ ||

ನಿಖಿಲಜನರೆದೆಯೊಳಗೆ ಶಿವತೇಜವಿಪ್ಪುದಾ-
ಪ್ರಖರಕಲೆಯೆನ್ನಹೊರಗೊಳಗು ಶಿವಲಿಂಗನಾ-
ಮಕವಾಗಿ ಶೋಭಿಪುದು ಸುಕೃತಿಯಾಂ ಮಮದರ್ಶನಂ ಪರರಿಗೇಕೆನುತ್ತ ||
ನಿಕಟ ನಿಶ್ಚಯವೆಸಗಿ ತಾನು ವಸ್ತ್ರದೊಳಡಗಿ
ಪ್ರಕಟವಾಗದಲಿಹುದು ತನ್ಮಹಾದೇವಿಯುರ-
ವಕಳಂಕಿತಾತ್ಮಸಚ್ಚರಿತರಾವಾಗಳುಂ ಗುಪ್ತರಾಗಿರುತಿರ್ಪರು || ೮ ||

ಎಲ್ಲರಾ ದೈವತವನೆದುರಿಟ್ಟು ಪೂಜಿಪೊಡೆ
ಲಲ್ಲೆಯಿಂದಾನು ಪಿಡಿದಾ ದೇವರಂ ಯಜಿಪೆ-
ನಿಲ್ಲಿ ತನಗಾರು ಸಮರಿಲ್ಲೆಂದು ಸೂಚಿಸುವ ಭಾವದೊಳು ತತ್ಪಾಣಿಯು ||
ಸಲ್ಲುವಾ ಗುರುಲಿಂಗಚರರನಲ್ಲದೆ ಮತ್ತೆ-
ಕ್ಷುಲ್ಲಕ ಸುರರ್ಕಳನು ಪೂಜಿಸದು ಮುಟ್ಟದದು
ಬಲ್ಲಶಿವಲಿಂಗಭಕ್ತರನಲ್ಲದಲೆ ಪರರ ಕನಸಿನೊಳುವೋಲಯಿಸದು || ೯ ||

ಇಷ್ಟಲಿಂಗವ ಧರಿಸಲಾಧಾರವಾದಿದಕೆ
ಸ್ಪಷ್ಟಮಿದು ಶಂಕುಗಿಂಕಿನಸಾಮ್ಯವಾಗದೀ-
ಸೃಷ್ಟಿಗುರುಮೂಲವಹ ಪರಶಿವಾಕ್ಷಿಗಳೆನ್ನ ದಿವ್ಯಭೂಷಣಗಳೆಂದು ॥
ಶಿಷ್ಟರೊಲೆಯುವ ತೆರದಿ ಕಂಗೊಳಿಪ ಶರಣೆಯಾ-
ಶ್ರೇಷ್ಠಕಂಠದ ಸೊಗವ ನಾನೇನ ಬಣ್ಣಿಸುವೆ-
ನಷ್ಟಮೂರ್ತಿಯ ಭಕ್ತನಾದ ಕವಿಗಲ್ಲದಲೆ ಮಿಕ್ಕವರಿಗಿದು ಸಾಧ್ಯವೆ? ॥ ೧೦ ॥

ಆ ಮಹಾದೇವಿಯೆಸೆವಾನನಕೆ ಚಂದ್ರನಂ-
ಪ್ರೇಮದಿಂ ಶಿವಕವಿಗೊಳೊಪ್ಪುವರೆ ಹೋಲಿಸಲು
ಭೂಮಿಯಂ ಬೆಳಗುತಿಹ ಸೂರ್ಯನಿಂ ಚಂದ್ರಮನು ಜನ್ಮಿಸಿಹಸೀವದನವು ॥
ನಾಮರೂಪಕೆ ಮೂಲರಾದ ಶಶಿರವಿಯರಂ-
ವಾಮ ದಕ್ಷಿಣ ನಯನಗಳನಾಗಿ ಸೂಡಿರುವ-
ಸೋಮಧರನಾದಿ ಶಕ್ತಿಯ ಸಾತ್ವಿಕದ ಕಳೆಯ ಸೂಡಿ ಮೆರೆಯುವದು ದಿಟವು ॥೧೧॥

ಸಲೆ ತುಟಿಗೆ ಹೋಲಿಪರು ಬಿಂಬಫಲವನು ವಿಬುಧ-
ರಿಳೆಯ ಸುಂದರಿಯರಿಗೆ ಹೋಲಬಹುದಾದೊಡೇಂ
ಸಲದಿದು ಮಹಾದೇವಿಯೋಷ್ಠಕುಪಮಾನವೀತುಟಿಯು ಮಂತ್ರದ ನೆಲೆವನೆ ॥
ನೆಲಿಸದಿರೆ ವೇದವೆನಿಸುವದೆ ತದ್ವಾಣಿಯುರೆ
ನೆಲಿಸುವದೆ ಜನಮನಂ ಶ್ರುತಿಯಾಗದಿರೆ ನುಡಿಯು
ನೆಲದೆ ಪೆಣ್ ಶುಕವಾಣಿಯೆನಿಸಬಹುದಿವಳಂತೆ: ಶ್ರುತಿವಾಣಿಯೆನಿಸಬಹುದೆ ॥೧೨॥

ಗುರುಲಿಂಗಜಂಗಮರ ಸುಪ್ರಸಾದವ ಮೆಲುವ
ಶರಣೆಯುರುದಂತಗಳುದಾಡಿಮದ ಬೀಜಗಳ-
ನರಿವುದಾದೊಡೆ ರಜತ ಶುಕ್ತಿಗಳನೊಂದಾಗಿ ಸಲೆ ತಿಳಿಯಲಾಗದೇಕೆ ॥
ನಿರುತಮವಳಾ ರದನಕಾಂತಿ ತುಟಿಯೊಳು ಬಿಂಬಿ-
ಸಿರಲೊರೆಯಲಾಗದುರುಶೋಭೆಯುಂಟಾಗಿರಲು
ವರಮಹಾದೇವಿಯಕ್ಕನ ಮೊಗವ ಬಣ್ಣಿಸಲು ಶೇಷನಿಗಸಾಧ್ಯವರಿಯೆ ॥ ೧೩ ॥

ಈ ವಾಣಿಗಂ ರಸನೆಯಾಧಾರಮಾಗಿರುತ-
ಮಾ ವಿವಿಧರಸವನೀಂಟುತ್ತೆ ತನುವಂ ಪೊರೆದು
ಸ್ವಾವಲಂಬನವಡೆದ ಜಿಹ್ವೇಂದ್ರಿಯದ ಕರ್ಮಸುಜ್ಞಾನಮಂ ಶರಣೆಯು ||
ಭಾವಿಸುತೆ ಗುರುಲಿಂಗ ನಾಮದೊಳು ತತ್ಸುಖವ
ಸಾವಧಾನದೆ ತಿಳಿದು ಭೋಗಿಸುವಳಾ ಮಹಾ-
ದೇವಿಯಾ ಹೃದ್ರೂಪ ಸನ್ಮಹಾಲಿಂಗಕರ್ಪಿಸುವಳಾನಂದವದನು || ೧೪ ||

ಭಕ್ತಿಯೆಂಬಂಗನೆಯು ನಿಜಮುಖವ ನೋಡಲಾ-
ಸಕ್ತಿಯಿಂ ರಚಿಸಿರ್ಪ ರನ್ನಗನ್ನಡಿಯೊಯೆನೆ-
ಸಕ್ತಸೌಂದರ್ಯದೊಳು ರಂಜಿಪುದು ತನ್ಮಹಾದೇವಿಯ ಕಪೋಲಯುಗವು ||
ಯುಕ್ತಮಿದುಮಲ್ಲದಿರೆ ನೋಳ್ಪ ಸಜ್ಜನರಲ್ಲಿ
ವ್ಯಕ್ತಸತ್ಯಪ್ರೀತಿಶೀಲಾದಿ ಸುಗುಣಗಳು
ಸೂಕ್ತಮೆನೆ ವರ್ಧಿಸುತಲಿರ್ದಪವೆ ನೈಜಮುದುಮುಪಚಾರ ವಚನಮಲ್ಲ || ೧೫ ||

ಬೊಮ್ಮನೆನ್ನಂ ನೋಡಿ ಭಾವಿಸುತೆ ಸಂಪಿಗೆಯ
ಕಮ್ಮಲರ ಸೃಷ್ಟಿಸಿದನೆಂದು ತನ್ನಾಸಿಕೆಯು
ಬಿಮ್ಮನಿಂದೆಸೆಯುತಿರಲಾ ಮಹಾದೇವಿಯರಿದದರ ಹಮ್ಮಳಿಯಲಂದು ||
ಒಮ್ಮನದೆ ನಾಸೇಂದ್ರಿಯದ ಕರ್ಮಸುಜ್ಞಾನ
ದೊಮ್ಮತಿಯೊಳಾಚಾರಲಿಂಗವೆಂದಿರದೆ
ಸನ್ಮತದೆ ತತ್ಸುಖವನನುಭವಿಪಳಾ ಮಹಾಲಿಂಗ ರೂಪಿಣಿಯಾಗಿ ತಾ. || ೧೬ ||

ಕಮಲ ಕುಮುದಂಗಳಂ ಕಣ್ಗೆಕವಿಯುಪಮಿಪಂ-
ಕ್ರಮದೆ ಜಗಮಂ ತಿಳಿವ ಶಕ್ತಿಯಲ್ಲಿಹುದಲ್ಲಿ
ವಿಮಲಮತಿ ಶಿವಶರಣೆ ಕಣ್ಣೊಳಿಹ ಚೇತನದ ನೆಲೆಯರಿದು ಶಿವಲಿಂಗದ ||
ಅಮಲನಾಮವನಿತ್ತು ತತ್ಸುಖವ ಭೋಗಿಪಳು-
ಭ್ರಮೆಯಳಿದು ತನ್ಮಹಾಲಿಂಗಕಾ ತೃಪ್ತಿಯನು
ನಿಮಿಷ ನಿಮಿಷಕೆ ಸಮರ್ಪಿಸುತೆ ಸದ್ಭಾವದೊಳು ಲಿಂಗದೆಡೆಗೆಡದಲಿಹಳು || ೧೭ ||

ಕಾಮಿನಿಯರೆಂಬ ಪೆಸರುಂಟು ಸುಂದರಿಯರಿಗೆ
ಕಾಮನಾವಶವಾಗಿಹುದು ಲಲನೆಯರ ಮನವು
ಕಾಮಧನುವೆನಿಪುದಾ ನಾರಿಯರ ಪುರ್ಬೆಂದು ಪೇಳ್ವಕವಿಗಳ ಮಾತಿಗೆ ||
ಕಾಮಹರ ಶರಣೆಯಹ ಮಾದೇವಿ ಸೈರಿಪಳೆ
ಕಾಮನಾಸ್ಪರ್ಶವಿದಕಾಗದಿರಲೆಂದು ತ-
ದ್ಭ್ರೂಮಧ್ಯಗಪ್ರಾಣಲಿಂಗಕಿದುಕಾವಲೆನೆ ತದ್ಭ್ರುಕುಟಿಯಸೆದಿರ್ಪುದು ||೧೮||

ಭಸಿತತ್ರಿಪುಂಡ್ರಾಂಕಿತ ಲಲಾಟಮಂ ಕಂಡು
ತ್ರಸಿತ ಮಾನಸರಾಗುತಿರ್ದರಾ ದುರ್ಜನರು
ಪ್ರಸಿತಮಾನಸರಾಗುತಿರ್ದರಾ ಸಜ್ಜನರು ತನ್ನಿಟಿಲ ಭಾಗ್ಯವೆನಿತೊ ||
ಅಸಮ ಗುರುಲಿಂಗ ಜಂಗಮರ ಪದಕಲ್ಲದಲೆ
ವಸುಮತಿಯೊಳನ್ಯ ಗುರುದೈವದಡಿಗೆರಗದಿಹ
ಮಿಸುಪ ಫಾಲದ ಯೋಗ್ಯತೆಯನರಿದು ಚರಲಿಂಗದನುಭವವಪಡೆದಳಾಗ ||೧೯||

ಅವಳ ತನು ಪರಿಮಳಕ್ಕೆರಪ ಮಧಕರರಾಶಿ-
ಯವೊಲೆಸೆವುದಾ ಮುಡಿಯು ಬಳೆದು ವಿಸ್ತರಮಾಗಿ-
ತವೆ ರೇಶಮಿಯಪಾಂಗಿನಿಂ ಮೃದುತೆಯಂ ತಾಳ್ದುಮನಕೆ ಮಂಗಲವಾಳ್ದಿರೆ ||
ನವದುಕೂಲದ ತೆರದೊಳಹುದು ಜಡಿಬಿಚ್ಚಿದೊಡೆ
ಪವಣಿಂದೆ ಕಟ್ಟಲದು ಪನ್ನಗದ ತೆರನಹುದು
ಶಿವಶರಣೆಗನುಕೂಲಮಾಗೆಸೆವ ಕಬರಿಯನದಾರ್ಬಣ್ಣಿಪರು ಜಗದೊಳು || ೨೦ ||

ಮಿಸುಪೋಲೆಗಳೊಳೆಸೆವ ಕಿವಿಯ ಸೌಂದರ್ಯವನು
ಸಸಿನದಿಂ ಶಬ್ದವನು ತಿಳಿವಸಾಮರ್ಥ್ಯವನು
ರಸಿಕಶಿವಶರಣೆಯರಿದಾಗಳಾಲೋಚಿಸುತಲಿದು ಮಹಾಲಿಂಗದಿಂದ ||
ಎಸೆದಾ ಪ್ರಸಾದಲಿಂಗಂ ತಿಳಿಯೆ ಜಗವೆಲ್ಲ
ಮಿಸುಪ ನಾದಾತ್ಮಕಂ ತಾನೆನಿಸಿ ಗ್ರಾಹ್ಯಮಹು-
ದೊಸೆದಿದಕೆ ಸರ್ವಮಿದು ಲಿಂಗರೂಪಂ ತಿಳಿದು ವರ್ತಿಪಳು ಮಾದೇವಿಯು ||೨೧||

ಇಂತು ಚಿದ್ಭಕ್ತಿಗಳು ಪ್ರೌಢತೆಯನಾಂತಂತೆ
ಕಾಂತೆಯಂಗೋಪಾಂಗಗಳಲಿ ಜವ್ವನಮೆಸೆಯ-
ಲಿಂತು ಸುಮದಂತೆ ಸಂಸ್ಪೃಹಣೀಯಮಾಗಿರಲು ಪಿತಗೆ ವರಚಿಂತೆಯಡಸೆ ‖
ಸಂತಸದೊಳೊಂದುದಿನಮಾ ಪುರದ ನೃಪಕೌಶಿ-
ಕಂತತಮಹೋತ್ಸವದೊಳುರೆ ಬಿನದದಿಂದವನು
ಕಂತುವಿನ ಪಾಂಗಿನಿಂ ಬರುತಿರಲು ತನ್ನಗರ ಜನರು ನಿಂದೀಕ್ಷಿಸುತಿರೆ ‖ ೨೨ ‖

ಆಗಳಾ ಮಾದೇವಿ ಜನರಾಗ್ರಹಕ್ಕೆ ಹೊರ-
ಬಾಗಿಲೊಳು ನಿಂದು ತನ್ನೃಪನನೀಕ್ಷಿಸುತಿರಲು-
ಸಾಗಿಬಂದಲ್ಲಿ ನಿಲಲಾರಾಜನೀಕ್ಷಿಸುತೆ ಕಂಡನು ಮಹಃದೇವಿಯ ‖
ರಾಗಮುಂ ಮಿಗೆ ದೃಷ್ಟಿನಡಲವಳ ಮುಖದಲ್ಲಿ
ನೀಗಿ ಲಜ್ಜೆಯನವಳ ಸ್ಥಿತಿಯನೆಲ್ಲವ ತಿಳಿದು
ಪೋಗಲಾರದೆ ಪೋದನವನು ಪರಿಜನರೊಡನೆ ಕಾಮಿಯಿಂದಂಧರಹರಿ ‖ ೨೩ ‖

ಅಂಧಂಗೆ ಶೂನ್ಯಂ ಜಗಂ ಬಗೆದು ತಿಳಿಯಿ ಕಾ-
ಮಾಂಧಂಗೆ ಶೂನ್ಯಂಜಗಜ್ಞಾನಮುಹದರಿಯ-
ಲಂಧಂಗೆ ಶೂನ್ಯಂ ತಮಂ ತೇಜಮುಂ ಶೂನ್ಯಮಿ ಜ್ಞಾನವೇ ಕಾಮಿಗೆ ‖
ಅಂಧಂಗೆ ಶೂನ್ಯಂ ಜಗದ್ರೂಪಮುಹದು ಕಾ-
ಮಾಂಧಂಗೆ ಶೂನ್ಯಂ ಜಗದ್ರೂಪವಿಜ್ಞಾನ-
ಮಂಧಂಗೆ ಶೂನ್ಯಂ ತದಜ್ಞಾನಮುಹುದು ಕಾಮಾಂಧಂಗೆ ಶೂನ್ಯಮಾತ್ಮ ‖ ೨೪ ‖

ಅಕ್ಕತಂಗಿಯರ ಪರಿವೆಯದಿಲ್ಲ ಕಾಮಿಗಳ-
ಗಕ್ಕರೆಯ ತಾಯ್‌ಮಗಳ ಪರವೆ ಇಲ್ಲಂ ಕಾಮಿ-
ಗಕ್ಕರತೆಯಾಚಾರ್ಯಸತಿಯಣುಗಿಯರ ಪರವೆಯಿಲ್ಲಮಾ ಕಾಮಿಗಳಿಗೆ ‖
ಚಿಕ್ಕವರ ಪರವೆಯಿಲ್ಲಂ ಹಿರಿಯರಾಪರವೆ
ಸೊಕ್ಕಿರುವ ಕಾಮಿಗಳಿಗಿಲ್ಲಮರಿಯಲ್ ಪುತ್ರಿ
ಮುಕ್ಕಣ್ಣನರಸಿಯುಳ ಪರವೆಯಿಲ್ಲಿನ್ನಾರ ಪರವೆಯುಹುದಾ ಕಾಮಿಗೆ ‖ ೨೫ ‖

ಕಾಮಪರನಾದಜನು ಸುತೆಯೊಡನೆ ರಮಿಸಿದನು
ಕಾಮಪರನಾದಿಂದು ಗುರುಸತಿಯ ಬೆರಸಿದನು
ಕಾಮಪರನಾದಿಂದ್ರನಾಮುನಿಯ ಪತ್ನಿಯೊಡವೆರೆದನಾನಿನ್ನು ಪೇಳ್ವೆ ॥
ಕಾಮಪರನಾದ ನಹುಷಂ ಶಚಿಯುನೆಳಸಿದನು
ಕಾಮಪರನಾದ ರಾವಣನುಮೆಯು ಬಯಸಿದನು
ಕಾಮಪರನಾದ ಕೌಶಿಕಸಂತಪೇಕ್ಷಿಸಿದನುರುತರ ಮಹಾದೇವಿಯು ॥ ೨೬ ॥

ಕೌಶಿಕಂ ನಂಬುಗೆಯ ದಾಸಿಯರ ಕರೆದು ತ-
ನ್ನಾಶಯವ ತಿಳುಪಿ ಬಹುಮಾನವಿತ್ತವರಿಗುಚಿ-
ತಾಶೆಯಂ ಪೆರ್ಚಿಸುತೆ ಕಳುಹಿದಂ ವರಮಹಾದೇವಿಯ ಕರೆಯಲೆಂದು ॥
ಲೇಸಹುದು ತಮಗೆಂದು ತನ್ನಾರಿಯರು ಮನದೋ-
ಳಾಶಿಸುತಲುರುಮಹಾದೇವಿಯಾಲಯಕೈದ-
ಲಾ ಸಮಸ್ತಾಭರಣಪೀತಾಂಬರವಕೊಳ್ಳುತಂ ಸಿದ್ಧರಾದರವರು ॥ ೨೭ ॥

ಇತ್ತಲಾ ಶಿವಶರಣೆ ಶಿವಪೂಜೆಯಂ ತೀರ್ಚಿ-
ಸುತ್ತಮು ಶಿವಾನುಭವಶಾಸ್ತ್ರಮಂ ಮನದೊಳೋ-
ದುತ್ತೆ ಕುಳ್ಳಿರಲಾಗಳಾ ರಾಜವೈಭವವ ಕಂಡ ನಾರಿಯರಲ್ಲಿಗೆ
ಚಿತ್ತದೊಳು ಯೋಚಿಸುತೆ ಬಂದು ಶರಣೆಯ ನಿರುಕಿ-
ಸುತ್ತೆ ಕೈಮುಗಿದು ಕೇಳಿದರಿಂತು ಪೇಳಕ್ಕ
ಸತ್ಯತೆಯಸತ್ಯತೆಯು ಮಾನ್ಯತೆಯಮಾನ್ಯತೆಯು ಸೃಷ್ಟಿಸಿದ ನೀಶನೇಕೆ ॥ ೨೮ ॥

ಎನಲು ಮಾದೇವಿಯುತ್ತರಿಸಿದಳು ತದ್ವಚನ-
ಕನುನಯದೊಳಿಂತು ಶೃತಿವಿಹಿತ ತತ್ತ್ವವ ಬಿಡದೆ
ಘನಕರ್ಮವೀ ವಿಷಮತಾಮೂಲವಾಗಿಹುದದೀಶ್ವರನ ತಪ್ಪಲ್ಲವು ॥
ಅನುಪಮಿತ ಕರ್ಮವದು ದ್ವಿವಿಧಮೆನಿಸಿಹುದು ಪಾ-
ವನವಿಹಿತಮುಂ ನಿಷಿದ್ಧವೆನಿಪ್ಪನಾಮದಿಂ-
ದನಘ ಸತ್ಕರ್ಮವೇ ವಿಹಿತವೆಂದೆನಿಪುದು ನಿಷಿದ್ಧವಿದೆ ದುಷ್ಕರ್ಮವು ॥ ೨೯ ॥

ಸತ್ಕರ್ಮವೆಸಗಿದವರತಿಸುಖವ ಪಡೆಯುವರು
ದುಷ್ಕರ್ಮವೆಸಗಿಪರು ದುಃಖವನೆಪಡೆಯುವರು
ಸತ್ಕರ್ಮಿಯಾಗಿ ಪಿಂತಣಜನ್ಮಸುಕೃತದಿಂ ರಾಜನಾಗಿಹನೀತನು ||
ಸತ್ಕರ್ಮವದನಾರುಮೆನಿತು ಮಾಡುವರನಿತು
ತತ್ಕಾಲ ಭೋಗಮಂ ಸ್ವರ್ಗಾದಿ ಪದವಪಡೆ-
ವರ್ಕರ್ಮವಿದನೆಸಗದಲೆ ದುಷ್ಕೃತಿಯನೆಸಗೆ ತಾಪಸಂಚಯವಪಡೆವರು || ೩೦ ||

ಕರ್ಮಕ್ಕೆ ಪ್ರಾರಬ್ಧ ಸಂಚಿತಾಗಾಮಿಯಪೆ-
ಸರ್ಮರೆಯೆ ಪ್ರಾರಬ್ಧಮದು ಪೂರ್ವಜನ್ಮದಾ-
ಮರ್ಮವನು ಸೂಚಿಪುದು ಸಂಚಿತವದೀ ಜನ್ಮಮಂ ತಿಳಿಪುದಾಗಾಮಿಯು ||
ನಿರ್ಮಿಪುದು ನಿಜಭವಿಷ್ಯದ ಜನ್ಮಕಥೆಯನಂ-
ತೊರ್ಮೆಗಂ ಬಂಧಿಸುತೆ ಜಗವನಾಂ ಪೇಳಲೇಂ
ನರ್ಮಗೊಳಿಪುದು ಮನುಜನೀ ಜಗದೆ ಸುಖವಡೆಯಲೆಸಗುವದು ಸತ್ಕರ್ಮವ ||೩೧||

ಇದೆ ಪುಣ್ಯ ಕರ್ಮವೆನಿಸುವದು ಭೂಲೋಕದೊಳ-
ಗಿದು ಭಜನ ಜಪ ತಪೋವ್ರತ ಯಜನರೂಪಮಹು-
ದಿದನುಚರಿಸುತ್ತೆ ಸ್ವರ್ಗಾದಿ ಲೋಕದೊಳಿರ್ದು ಸುಕೃತವನುಭವಿಸಿಕಾಮಿ ||
ಪದುಳದಿಂದೀ ಲೋಕಕೈತಹನು ಕರ್ತವ್ಯ-
ಮಿದಕಿಲ್ಲ ಬಿಡುಗಡೆಯು ನಿಷ್ಕಾಮಿಯಾಗುವದೆ
ವಿದಿತಮುಕ್ತಿಯ ಮಾರ್ಗಮದು ಕಾಮಿಯಾಗುವದೆ ಸಕಲ ಭೋಗದ
ಮಾರ್ಗವು || ೩೨ ||

ಧರ್ಮ ಸತ್ಕರ್ಮಗಳಿಗಿನಿತಿಲ್ಲ ಭಿನ್ನತೆಯ-
ಧರ್ಮ ದುಷ್ಕರ್ಮಗಳಿಗಿನಿತಿಲ್ಲ ಭಿನ್ನತೆಯು
ಧರ್ಮದಿಂ ಸತ್ಯಾದಿ ಸದ್ಗುಣಗಳುದಯಿಪವಧರ್ಮದಿಂ ದುರ್ಗುಣಗಳು ||
ಧರ್ಮವೇ ಭೋಗ ಮೋಕ್ಷಂಗಳಿಗೆ ಕಾರಣವ-
ಧರ್ಮವೇ ದುಃಖ ದುರ್ಗತಿಗಳಿಗೆ ಕಾರಣವು
ಧರ್ಮವೇ ಯೋಗವಿದಧರ್ಮವೇ ಭವರೋಗವರಿಯುತಾಚರಿಸಿರವ್ವ || ೩೩ ||

ಆಗಳಾನಾರಿಯರು ಹೃಷ್ಟಮಾನಸರಾಗೆ
ರಾಗದಿಂದೋರ್ವಳವರೊಳಗೆ ಕೈಮುಗಿದು ತಲೆ-
ವಾಗಿ ಕೇಳಿದಳಕ್ಕ ನೀನೀಗಳೆಮಗೊಂದು ಕಥೆಯೊರೆದು ದೃಢಗೊಳಿಪುದು ||
ಆಗಲಾ ಚಿತ್ರಗೊಟ್ಟಾಲಿಸಿ ವೈಭವ-
ಕ್ಕಾಗರಂ ಸಾಳ್ವದೇಶಂ ಮೆರೆದುದಲ್ಲಿಹುದು
ಭೋಗಮಂದಿರವೆನಿಸಿ ವೈಡೂರ್ಯಪುರವದರೊಳಿಹನು ನೃಪವಜ್ರಬಾಹು || ೩೪ ||

ಅವಗೆ ಮುನ್ನೊರ್ಜನರು ಮಡದಿಯರುಮವರೆಲ್ಲ-
ತನೆಬಂಜೆಯರ್ಕಳಾಗಿರಲು ಕ್ಷಿತಿಪತಿಯು ವಂ-
ಶವನು ರಕ್ಷಿಸಲು ಮತ್ತೋರ್ವ ಸುಮತಿಯೆನಿಪ್ಪ ಕನ್ನಿಕೆಯ ಲಗ್ನವಾಗಿ ||
ನವರತಿಯೊಳಿರೆ ಕೆಲದಿನದೊಳೆ ಗರ್ಭಿಣಿಯಾಗಿ
ಯುವತಿ ಕಂಗೊಳಿಸಿದಳು ನೃಪತಿಹರುಷಿತನಾಗೆ
ಸವತಿಯರ ಮತ್ಸರದ ಕಿಚ್ಚು ಪುಟವಾಯ್ತು ಗರ್ಭವದು ಬೆಳದಂತೆ ಬೆಳೆದು ||೩೫||

ಹೃದಯದೊಳು ಪ್ರಜ್ವಲಿಸಿ ಮತ್ಸರಾಗ್ನಿಯು ಪ್ರಕಟ-
ಸಿದುರ್ದೋಃತೇಜದ ಕಿಡಿಯನೆಂಬಂತೆ ಸುಮತಿಯಂ
ಸುದತಿಯರು ಕಾಡತೊಡಗಿದರದನು ಬಣ್ಣಿಪೆನು ಸುಗುಣ ಕುಗುಣವನರುಪಲು ||
ಪದುಳದಿಂ ಮೇಲೆ ಪ್ರೇಮವ ತೋರುತೊಳಗೊಳಗೆ
ಕದನಂ ದಾಸದಾಸಿಯರೊಳಗೆ ಹಚ್ಚಿದರು
ಚದುರತನದಿಂ ಸೇವಕರಿಗವಳಹತ್ತಿರಕೆ ಹೋಗಗೊಡದಾಗಿರ್ದರು || ೩೬ ||

ತನ್ನಡಿಗೆಯಂ ತಾನೆ ಗೈವ ಪೊಳ್ತೊದಗಿದರು
ಸನ್ನುತೆಯು ಬೆದರಲಿಲ್ಲಂ ಮನದೆ ಕಾರಣವ
ನನ್ನಿಯಿಂದಾಗ ಯೋಚಿಸಲಿಲ್ಲ ಪತಿಗದನು ಪೇಳಲಿಲ್ಲಿನಿತು ಸಾಧ್ವಿ ||
ಬನ್ನಬಡದವಳು ತನ್ನಯ ಸೇವೆಯಂ ತಾನು
ಭಿನ್ನವೆಣಿಸದೆ ಮಾಡಿಕೊಳ್ಳುತ್ತೆ ಪತಿಸೇವೆ-
ಯನ್ನು ಬೇಸರಿಯದಲೆ ಮಾಡುತಿರ್ದಳ್ ಸ್ವೈಜಭಾಗ್ಯಮಂ ಬಣ್ಣಿಸುತ್ತ || ೩೭ ||

ಕುಮತಿಯರಿಗಿನಿತಕ್ಕೆ ಸಂತೋಷವೆನಿಸದಲೆ
ಸುಮತಿಯಂ ಕೊಲ್ಲಲಾಲೋಚಿಸುತಲಾಗ ಪತಿ-
ಯಮಳವಂಶದ ನಾಶಮಂ ತಾವು ಲೆಕ್ಕಿಸದೆ ಯುಕ್ತಿಯಿಂ ವಿಷವಿತ್ತರು ||
ಸುಮಕೋಮಲೆಗೆ ಕೊಟ್ಟ ವಿಷವು ತೀಕ್ಷ್ಣವಲ್ಲ
ಕ್ರಮದಿಂದೆ ದೇಹವನು ಕೆಡಿಪುದಾದುದರಿಂದೆ
ವಿಮಲಾಂಗಿಯೊಳು ರಕ್ತಗತವಾಗಿ ಕಾಯನು ಕೆಡಿಸಲಾಯಿತ್ತನುದಿನಂ || ೩೮ ||

ಸ್ವಲ್ಪದಿವಸದೊಳವಳ ತನು ದುರ್ವ್ರಣಿತಮಾಗೆ
ಕಲ್ಪಿಸುತೆ ವ್ಯಭಿಚಾರದಪವಾದಮಂ ಹೊರಿಸಿ-
ಜಲ್ಪಿಸಲು ನೃಪನಾಗನೋಡುತಾತನು ನಂಬಿ ನಾರಿಯರ ಮಾತುಕೇಳಿ ||
ಕಲ್ಪನೆಯಮೀರಿದತಿ ಕೋಪದಿಂ ರಾಜನವ-
ನಲ್ಪಮತಿಯಿಂದೇಳು ತಿಂಗಳದ ಗರ್ಭಿಣಿಯ
ಕಲ್ಪಿಸದೆ ಕಾಡಿಗಟ್ಟಿದನು ರೋಗಾಸ್ಪದೆಯ ದುರ್ದೆಶೆಯ ಕೇಳ್ವರಾರು || ೩೯ ||

ಕೀವರಕ್ತವು ಸುರಿವ ದೇಹವನು ಕಂಡು ತ-
ದ್ಭಾವ ಸದ್ಗುಣಗಳನು ತಿಳಿದವರು ಮರುಗಿದರು
ಗಾವಿಲರು ಸಮ್ಮತಿಸಿ ರಾಜನಂ ಹೊಗಳಿದರು ತಕ್ಕುದಿಂ ಗೈದನೆನುತಾ ||
ಸಾವಧಾನದೆ ಶಿವನ ನೆನೆಯುತ್ತಲಾ ಸುಮತಿ
ದೇವಿಯೈದಿದಳು ಪ್ರಾರಬ್ಧಮಂ ನಿಂದಿಸುತ
ಲಾವನಕೆ ಸಂಚಿತವ ಭೋಗಿಸಲು ಸಮತೆಯಿಂ ಪತಿಗುಮೆಲ್ಲರಿಗೂ ನಮಿಸಿ ||೪೦||

ಕಿಂಕಿರರು ಕಾಡಿನೊಳು ಬಿಟ್ಟೈದುತಿರಲವಳು
ಸಂಕಟದೆ ದುಃಖಿಸುತೆ ಶಿವನ ಭಜಿಸುತ್ತಿಹಳು
ಶಂಕರನೆ ತನ್ನ ಸರ್ವಸ್ವವೆಂದರಿದಿಹಳು ತಾಪಮಂ ಮರೆದಿರುವಳು ||
ಶಂಕೆಯನುನೀಗಿ ತದ್ಧ್ಯಾನತತ್ಪರಳಹಳು
ಪಂಕಜಾಕ್ಷಿಯು ಕರಣಗಳನಾಗಳರ್ಪಿಪಳು-
ತಾಂ ಕರುಣಿಸಲು ಹರನು ಚರನಾಗುತೈದಿದನು ಬರೆಕಂಡು ನಮಿಸುತಿಹಳು ||೪೧||

ಶಿವಯೋಗಿಯವಳೆಲ್ಲ ತಾಪಮಂ ನೆರೆತಿಳಿದು
ಭವರೋಗಮಂ ಕಳೆವ ಭಸ್ಮಮಂ ನಲಿದಿತ್ತು
ಶಿವದೀಕ್ಷೆಯಂ ಮಾಡಿ ಲಿಂಗಮಂ ಕರುಣಿಸುತೆ ತೀರ್ಥಮಂ ಕೊಟ್ಟು ವಿಷದ ||
ಬವಣೆಯಂ ಪರಿಹರಿಸಿ ಪ್ರೇಮದಿಂ ಕರೆದೊಯ್ದು
ತವೆಧರ್ಮಪುರದೊಳಗೆ " ಶಿವಶರ್ಮ " ನೆಂಬ ಧನಿ-
ಯವನ ಮನೆಯೊಳಗಿರಿಸಿ ಪೋದನಾ ಶಿವಗುರುವು ಸುಮತಿಯಲ್ಲಿರ್ದಳೊಲಿದು ||೪೨||

ಶಿವಶರ್ಮನವಳನ್ನು ಮಗಳಂತೆ ಕಾಣುತಿಹ-
ನವನ ಪತ್ನಿಯು ವಿಮಲೆಯಾತನಂತೀಕ್ಷಿಸಳು
ನವಮಾಸವೀಕ್ರಮದೆ ಪೂರೈಸಲಾಸುಮತಿ ಪಡೆದಳೊಲವಿಂ ತನಯನ ||
ಶಿವಯೋಗಿ ಬಂದಾಗ ಶಿವಲಿಂಗಮಂ ಧರಿಸಿ
ನವಸುತಗೆ ಭದ್ರಾಯುವೆನಿಪ ನಾಮವನಿಟ್ಟು-
ತವೆ ಶುಭಾಶೀರ್ವಾದಂ ಮಾಡಿ ಪೋಗುತಿರೆ ಬಳೆಯಲಾದಂ ಪುತ್ರನು || ೪೩ ||

ವೀರಮಾಣೆಯೊಳವನು ಚಾಪವಿದ್ಯಾದ್ಯಖಿಲ-
ಸಾರಶಾಸ್ತ್ರವ ಕಲಿತು ಶಿವಭಕ್ತಿ ಸುಜ್ಞಾನ
ಸಾರತೆಯನೊಳಗೊಂಡ ಗ್ರಂಥಗಳನೋದುತ್ತೆ ಧರ್ಮನೀತಿಯನರಿಯುತ ||
ವೀರನೆಂದೆನಿಸಿ ತಜ್ಜನನಿಯಿಂ ಜನಕನ ವಿ-
ಚಾರಮಂ ತಿಳಿದು ಹಟದಿಂದಲಪ್ಪಣೆಯೊಡೆದು
ಶೂರನಾ ನಿಜಪಿತನ ಪರಿಚಯವ ಮಾಡಿಕೊಳಲೈದಿದನು ಧೈರ್ಯದಿಂ || ೪೪ ||

ಅನಿತರೊಳು ವಜ್ರಬಾಹುವಿನ ನಗರಕ್ಕೆ ಪರ-
ಜನಪತಿಯು ಬಲದೊಡನೆ ಬಂದು ಮುತ್ತಿಗೆಯಿಕ್ಕಿ
ಘನಯುದ್ಧವೆಸಗುತ್ತೆ ತತ್ಸೈನ್ಯಮಂ ಕೊಂದು ನೃಪ ವಜ್ರಬಾಹುವನ್ನು ||
ಸೆಣಸಿ ಶರೆಪಿಡಿಯುತಿರಲೀ ಯಷ್ಟದಶವಯೊ-
ವಿನುತ ಬಾಲಕನೈದಿ ಮಗಳಿ ಹೋರಾಡಲೋ-
ರ್ವನೆ ವಿಜಯವಂ ಪಡೆದು ಪಿತನ ರಕ್ಷಿಸುತಿರಲಿಕಾಯೋಗಿ ಬಂದು ನೃಪಗೆ ||೪೫||

ಸಕಲಮಂ ತಿಳುಪಿ ತತ್ಸುಮತಿಯಂ ಕರೆಯುಸುತೆ
ನಿಖಿಳಸತಿಯರಿಗೆ ಪಶ್ಚಾತ್ತಾಪವಾಗುತಿರ-
ಲಖಿಲರಿಗೆ ದೀಕ್ಷೆಯಂ ಗೈಯುತಾ ಪೌತ್ರಿಥಭದ್ರಾಯುಗೆ ರಾಜ್ಯವಿತ್ತು ॥
ಅಕಳಂಕ ಶಿವಯೋಗಿ ವೀರಶೈವರ ನೀತಿ
ಸುಕರ ನಿಜಧರ್ಮನಮಂ ತತ್ವಮಂ ಬೋಧಿಸುತ
ಸುಖದೊಳಿರಲಾಶಿಷವನಿತ್ತು ಪೋಗಲ್ಕವರು ಚರಿಸಿ ಮುಕ್ತಿಯ ಪಡೆದರು ॥೪೬॥

ನಿಜ ಸುಜನ ಕುಜನರೊಳು ನಡೆದ ಹೋರಾಟವಿದು
ಸುಜನರಾತ್ಮದ ತೇಜಕಾ ಕುಜನರೇ ಮುಖ್ಯ-
ವಜಮುಖಾಮರರಿಗಾದರು ಖಲರು ಬಿಟ್ಟಿಲ್ಲ ನರರ ಪಾಡೇನು ತಿಳಿಯೆ ॥
ವಿಜಯಿಪರು ಸದ್ಭಕ್ತರೆಲ್ಲ ತಾಪವನರಿದು
ಭಜಿಪುದಾ ಭಕ್ತಿಯನೆ ಸುಮತಿಯೆಂದದೆ ನೀವು
ಧ್ವಜವದಾಸನ್ನೀತಿ ಧರ್ಮತತ್ವಕ್ಕದನೆ ತಿಳಿದು ಸಾಧಿಪುದೆಲ್ಲರು ॥ ೪೭ ॥

ಎಂದು ಸತ್ಕಥೆಯನ್ನು ಪೇಳಲಾ ನಾರಿಯರ-
ಮಂದಮೋದಾಸ್ಪದರು ತಾವಾಗಿ ಕೈಮುಗಿದು
ಚಂದದಿಂದಕ್ಕ ನೀನೆಮಗೆ ಸಾಮಾನ್ಯ ನೀತಿ ಸುಧರ್ಮ ತತ್ವಗಳನು ॥
ಇಂದು ಪೇಳಿದೆ ನಾಳಿಗೆಮ್ಮ ಮತನೀತಿಯಾ-
ನಂದಕರ ಧರ್ಮ ತತ್ವಂಗಳಂ ಪೇಳ್ವುದೆನ-
ಲಿಂದುವದನೆಯರಾಡಿದಾ ವಚನವಾಲಿಸುತಲೊಪ್ಪಿದಳು ಮಾದೇವಿಯು ॥ ೪೮ ॥

ಆಗಳೆಲ್ಲರು ನಮಿಸಿ ಪೋಗುತಿರಲನಿತರೊಳು
ಸಾಗಿಬಂದರು ರಾಜದೂತಿಯರು ಮಡಿರನ್ನ
ದಾಗಿನಗಳಂ ಕೊಂಡು ಬರೆ ನೋಡಿ ಮಾದೇವಿಯವಳ ಜನನೀ ಜನಕರು ॥
ಸ್ವಾಗತಿಸಿ ಕುಳ್ಳಿರಿಸುತಿರಲು ದಾಸಿಯರಿಂತು
ಸ್ವಾಗಮನ ಕಾರಣವ ತಿಳಿಸಲಾದರು ಬಗೆಯು
ರಾಗ ಸಾಗರದೊಳಗೆ ಲೋಲಾಡುವಂದದೊಳು ಸರಸ ಮಧುರೋಕ್ತಿಯಿಂದಾ ॥೪೯॥

ನಿಮಗೊಂದು ಪೊಸ ಸುದ್ದಿಯನು ತಿಳಿಸಲೈದಿದೆವು
ನಿಮಿಷಾರ್ಧದೊಳು ನಿಮ್ಮ ದಾಸಿಯಪ್ಪಳು ಸಿರಿಯು
ವಿಮಲ ಪುತ್ರಿಯ ಪಡೆದ ನೀವೆ ದನ್ಯರು ನಿಮ್ಮ ಮಾದೇವಿಯರಸಿಯಹಳು ॥
ಕಮಲಿನಿಯು ಕಾಸಾರದೊಳುದಿಸಲೇನಾಯ್ತು
ಕಮಲಾಪ್ತಕರವಿಡಿಯೆ ಸೊಬಗಿದೆ ಸರೋವರಕೆ
ಕುಮುದಾಕ್ಷಿಯಂ ಕರೆತರಲೆ ಮನಟ್ಟಿದಮ್ ನೃಪನಿತ್ತು ಭೂಷಣಗಳ ॥ ೫೦ ॥

ಎನುತೆ ಭೂಷಣಗಳಂ ತೋರಿಸಲು ಮಾದೇವಿ
ಇನಿತವನು ನೋಡದಲೆ ಕಣ್ಮುಚ್ಚುತೈದಲಾ-
ವನಿತೆಯರು ಕಂಡು ಬೆರಗಾಗುತಿರೆ ಸುಮತಿ ನಿರ್ಮಲರು ಹರುಷಿತರಾಗುತ ॥
ಮನವೊಪ್ಪಿ ಮಾತನಾಡಿದರವರ ನೀಕ್ಷಿಸುತೆ
ಜನಪತಿಗೆ ಪೇಳಿರೌ ತಂಗಿಯರೆ ವಾರ್ತೆಯನು
ತನುಜಗಿಲ್ಲಿಂ ನೃಪನ ವರಿಸುವಾಶೆಯು ನಮಗೆ ಭವಿಗೆ ಕೊಡುವಾಶೆಯಿಲ್ಲಾ ॥೫೧॥

ಈಗಳಿಂತೆನ್ನದಿರಿ ರಾಜನುರುತರ ಕೋಪಿ-
ಯಾಗಿಹನು ನಿಮ್ಮಮನೆ ನೆಲದಸಮವಾಗದಿರ-
ದೈಗಹನ ಯೋಚನೆಯಮಾಡಿ ಕಾರ್ಯವನೆಸಗಿಕೈ ಕುಲವ ನೋಡಬೇಡಿ ॥
ಭೋಗಮಂ ತಪ್ಪಿಸುವರಾರು ದುಷ್ಕಾಮುಕಂ
ಸಾಗಿ ತಾನೇ ಬರುತಲಿರ್ದಪನು ಕೊಟ್ಟ ಪೆ-
ಣ್ಣಾಗಳುಂ ಕುಲಕೆ ಹೊರತೆಂಬ ನಾಣ್ಣುಡಿಯುಂಟು ನಾಳೆಪೇಳಿರಿ ಯೋಚಿಸಿ ॥೫೨॥

ಇಂತು ಪೇಳುತ್ತಲಾ ಲಲನೆಯರು ಪೋಗಲೇ-
ಕಾಂತದೊಳು ಸುತೆಯೊಡನೆ ಯೋಚಿಸಲ್ತೊಡಗಿದರು
ಶಾಂತಿಯಿಂದಾ ಮಹಾದೇವಿ ತಾಯ್ತಂದೆಗಳ ನೋಡಿಯುತ್ತರವಿತ್ತಳು ॥
ಚಿಂತಿಸಲು ಬೇಡಿ ನೃಪಗಾಗಿ ಬೆದರಲುಬೇಡಿ
ಕಂತುಹರ ದೀಕ್ಷೆಯಂ ನೃಪತಿ ಪಡೆವಡೆ ನಾನು
ಭ್ರಾಂತಿಯಿಲ್ಲದೆ ಲಗ್ನವಾಗುವೆನು ನಿಮಗಾಗಿ ಯೆನಗಾಶೆಯಿಲ್ಲವರಿಯೆ ॥ ೫೩ ॥

“ ಲಿಂಗವೇ ಪತಿಯೆನೆಗೆ ’ ಮಂದಿಗವನೆಂತು ತ-
ನ್ನಂಗನೆಯನೊಪ್ಪಿಸುವ ನೆಮಗೇಕೆ ಚಿಂತೆ ಬಿಡಿ
ಪಿಂಗದೆ ನಿಮಿತ್ತಕ್ಕೆ ಪೇಳಿ ಕಳಿಪುದು ನೃಪಗೆ ಶಿವನ ಪ್ರೇರಣೆಯೆನ್ನುತಾ ||
ಭಂಗವೊದಿಗಿದೊಡೀಗ ನಿಮಗೆ ತೊಂದರೆಯಹುದು
ತುಂಗ ಮಾತಾಪಿತರಿಗೀಯದಿರ್ದಡೆ ಸುಖವ
ಮಂಗಲದ ತನಯರಲ್ಲಿವರು ತಾಯ್ತಂದೆಗಳ ದೇವರೆಂದರಿವರವರೆ || ೫೪ ||

ವಂದ್ಯರಹ ನಂದನರು ಪಿತೃಗಳಂ ಯಜಿಪರಾ-
ನಂದಿಸುವರವರೆ ಪಿತೃಶಾಸನವ ಪಾಲಿಸುತೆ
ವಂದಿಪರು ಗುರುದೇವತಾದಿಗಳ ರೂಪವೆಂದಿರಿದು ಸತ್ಪುತ್ರರೆನಿಸಿ ||
ತಂದೆತಾಯ್ಗಳ ಜಸವ ವರ್ಧಿಸಲು ಯತ್ನಿಪರು
ನಿಂದೆಯದು ವಂಶಕ್ಕೆ ಬರದಂತೆ ವರ್ತಿಪರು
ಮಂದಸೂನುಗಳಂತೆ ವಿಪರೀತರಾಗರವರೀ ದೇಹವಳಿಯುವನಕೆ || ೫೫ ||

ನಿಮ್ಮಿಂದ ಜನ್ಮಿಸುತೆ ವಿದ್ಯೆಯಂ ಪಡೆದಾನು
ನಿಮ್ಮೀ ಪ್ರಭಾವಕ್ಕೆ ಕುಂದನೆಂದುಂ ತಹೆನು
ನಿನ್ಮೋಜಕಂ ಕೊರತೆಯಾಗದಂತಾ ನೃಪತಿಯೋಳ್ ನಡೆದುಕೊಳ್ವೆನೆಂದು ||
ಸುಮ್ಮಾನದಿಂದು ಸುರಿ ತನ್ಮಹಾದೇವಿಯಾ
ದುಮ್ಮಾನಮಂ ಬಿಡಿಸಿ ನಮಿಸುತೆ ಶಿವಪೂಜೆ-
ಗುನ್ಮಾನಸದೆ ತೊಡಗಿದಳ್ ಬಣ್ಣಿಪಂತೆ ಶಿವಯೋಗಿಗಳು ನೋಡಿ ನೋಡಿ ||೫೬||

ಸುಮತಿ ನಿರ್ಮಲರಾಲಿಸುತ್ತೆ ತದ್ವಚನವನು
ಪ್ರಮುದಾಬ್ಧಿಯೊಳ್ ಮುಳುಂಗುತೇ ಮರೆದು ಯೋಚನೆಯ
ಸುಮತೆಯಿಂ ಸುತೆಯ ಶಿವಪೂಜೆಯಂ ನಿರುಕಿಸುತೆ ತಾವು ತತ್ಪರರಾದರು ||
ವಿಮನಸ್ಕನಾಗಿ ತರಭೋಗದೊಳು ಕೌಶಿಕನು
ಕಮನೀಯವಹ ಮಹಾದೇವಿಯಾ ಪ್ರತಿಮೆಯನು
ಸ್ವಮನಸ್ಸು ಪೀಠದೊಳಗಿಟ್ಟು ಧ್ಯಾನಿಸುತಿರಲು ತದ್ದೂತಿಯರ್ ಬಂದರು || ೬೭ ||

ಬಂದು ವಂದಿಸಲು ಕಣ್ತೆರೆದು ಕೌಶಿಕವಾಗ
ಮುಂದೆ ನಿಂದಿರುವಂಥ ದಾಸಿಯನೆ ಮಾದೇವಿ-
ಯೆಂದು ಬಗೆದಂದು ವಂದಿಪುದೇಕೆ ಎನ್ನರಸಿ ಬಾಯೆನುತೆ ಕೈವಿಡಿಯಲು ॥
ಕುಂದರದನೆಯು ಮಂದಹಾಸ್ಯದಿಂದಂ ಜಾರಿ
ಪುಂದಭೂಪತಿಗಿಂದುಮುಖಿಯವಳ ವಾರ್ತೆಯ
ಚಂದದಿಂದೊರೆದೊಂದು ದಿನಪವಧಿಯನು ಕೇಳಿನೊಂದೊಪ್ಪಿದಂ ರಾಜನು ॥೫೮॥

ಕೃತ್ಯವೆಲ್ಲವ ಲಿಂಗದೊಳಗರಿಡು ಮಾದೇವಿ
ಕತ್ತಿಪಳು ಪಾತಾಳವಿತ್ತಿತ್ತ ಶ್ರೀಪಾದ-
ವತ್ತತ್ತ ಬ್ರಹ್ಮಾಂಡವಿತ್ತಿತ್ತ ಮಣಿಮುಕುಟವತ್ತತ್ತ ದಶದಿಕ್ಕದು
ಇತ್ತಿತ್ತ ದಶಭುಜಗಳತತ್ತ ಚೆನ್ನಮ-
ಲ್ಲೋತ್ತಮನೆ ನೀವೆಲ್ಲ ಕರತಲಕೆ ಬಂದು ಸೊಗ
ವಿತ್ತು ಚುಳುಕಾದಿರ್ಕೆಯೆನುತೆ ವಚನವ ರಚಿಸಿ ಬಣ್ಣಿಸುತೆ ನಲಿದಿರ್ದಳು ॥ ೫೯ ॥

ಅಂತು ಸಂಧಿ ನಾಲ್ಕಕ್ಕಂ ಪದಗಳು ೨೦೧ ಕ್ಕಂ ಶುಭಂ

॥ ಶ್ರೀಗುರು ಸಿದ್ಧಲಿಂಗಾಯ ನಮಃ ॥

# ಶ್ರೀಅಕ್ಕಮಹಾದೇವೀ ಪುರಾಣಂ

## ೫ ನೇ ಸಂಧಿ

**ಸೂಚನೆ—** ಹರುಷದೆ ಮಹಾದೇವಿ ಲಿಂಗಾರ್ಚನಾ ಸುಖದೊ-
ಳಿರುತೆ ಕೌಶಿಕಗೆ ಶಿವಧರ್ಮದೀಕ್ಷೆಯ ಪಡೆಯ-
ಲೊರೆದು ಕಳುಹುತ್ತೆ ಪೆಣ್ಮಕ್ಕಳಿಗೆ ನಿಜನೀತಿ ಧರ್ಮತತ್ವವನೊರೆದಳು ॥

ಪರಮ ತತ್ವವ ಮರೆದು ಜೀವನೋದ್ಯೋಗದೊಳ್-
ಬೆರೆದಿಪರ್ಪ ಗೊಗ್ಗಯ್ಯನೆಂಬ ಸದ್ಭಕ್ತನಿಗೆ
ಕರುಣೆಯಿಂದುದ್ಯಮದೆ ಶಿವತತ್ವಮಂ ತಿಳಿವಕಲೆಯನುಪದೇಶಿಸುತ್ತಾ ॥
ಶರಣನಂಗೈದು ಪೊರೆದಲ್ಲಮಪ್ರಭುವರನ-
ಪರತರ ಜ್ಞಾನೋಪದೇಶಮೆನ್ನಂ ಬಿಡದೆ-
ಪೊರೆಯಲಾವಾಗಳುಂ ಸುಶಿವಾನುಭವದ ಮತಿಯಿತ್ತುಗೆಯೊಜ್ಜುಗದೊಳು ॥ ೧ ॥

ಶಿವಪೂಜೆಯಂ ತೀರ್ಚಿ ಮನೆಗೆಲಸಗಳ ಸದಾ
ಶಿವಭಾವನೆಯನಿಟ್ಟು ಮಾಡಿ ಮುಗಿಸುತ್ತೆ ಪರ–
ಶಿವನ ಸುಜ್ಞಾನಾನುಭವದೊಳಗೆ ಸ್ತ್ರೀಯರೊಡರೆವೆಯುತೆ ಮಹಾದೇವಿಯು ॥
ಭವಗೋಷ್ಠಿಯಂ ಮರೆದು ಕುಳ್ಳಿರ್ದ ಸಮಯದೊಳು
ಜವದಿಂದೆ ಬಂದರಾ ನೃಪನ ದಾಸಿಯರಲ್ಲಿ
ನವದಿವ್ಯ ಭೂಷಣ ಸುಪೀತಾಂಬರಂಗಳಂ ಕೊಂಡು ಕರದೊಯ್ಯಲೆಂದು ॥ ೨ ॥

ಬಂದು ನಮಿಸಲ್ಕೆ ತಿಳಿದಾಮಹಾದೇವಿ ಬಗೆ-
ದಂದು ನೃಪದಾಸಿಯರ ನೋಡಿ ನುಡಿದಳುಹಿತದೆ
ಬಂದಿರಾ ಬನ್ನಿರೌ ಕುಳ್ಳಿರೆಂದುಪಚರಿಸಲವರು ನಮಿಸುತೆ ಕುಳಿತರೆ ॥
ಕುಂದಿ ಬೆದರುತ್ತ ನಿರ್ವಾಹದಿಂ ತಿಳಿಸಲ್ಕೆ
ಬಂದ ಕಾರಣವ ಕೇಳುತ್ತೆ ಶಿವಶರಣೆ ನಲ-
ವಿಂದೆ ಪೇಳಿದಳಿಂತು ನಿಮ್ಮರಾಜನು ನಮ್ಮ ಧರ್ಮದೀಕ್ಷೆಯ ಪಡೆದರೆ ॥ ೩ ॥

ಸಾಧ್ಯಮವನೊಲ್ಲದಿರಲಿಲ್ಲವೆನೆ ದಾಸಿಯರು
ಚೋದ್ಯವೆನ್ನುತೆ ಪುನದೆ ಮರುಮಾತನಾಡದಲ-
ಸಾಧ್ಯಳಿವಳೆಂದು ಬಗೆದಂದು ರಾಜನಿಗರುಹಲಾಗಳ್ಕೈದಿದರು ನಮಿಸಿ ॥
ಶ್ರದ್ಧೆಯಿಂದರಿದಲ್ಲಿ ಕುಳಿತವರೊಳೋರ್ವಳನ-
ವದ್ಯಳಂ ವಂದಿಸುತೆ ನಿಂತು ಕೇಳಿದಳಾಗ
ಬೋಧ್ಯವಹ ಧರ್ಮದ ರಹಸ್ಯವನು ತಿಳಿಸೆಂದು ನಯದಿಂದಲಾಶಿಸುತ್ತ. ॥ ೪ ॥

ಕೇಳಲಾ ಶಿವಶರಣೆಯುತ್ಸಾಹಮಂ ಮನದೆ
ತಾಳಿ ಮುದದಿಂ ನುಡಿದಳಿಂತು ಕೈಯಂ ಮುಗಿದು
ಕೇಳಿರೌ ಧರ್ಮ ವಿಷಯದ ಪಾಠಮಂ ನಿಮಗೆ ತಿಳಿದನಿತನೊಪ್ಪಿಸುವೆನು ॥
ಕಾಲಕಾಲಕೆ ಬರುವ ಸಂಸಾರ ಸಂಕಟವ
ಲೀಲೆಯಿಂ ಸುಜ್ಞಾನದಿಂದಲರಿದನುಭಾವಿ–
ಮೇಳದಿಂದುದಿಸಿದವು ವೀರಶೈವ ಸುಧರ್ಮ ನೀತಿಗಳು ತಿಳಿಯಿರಪ್ಪ. ॥ ೫ ॥

ಮನುಜನರಿಷಡ್ವರ್ಗ ಭಾಧೆಯೊಳಗಾಗದಲೆ
ಘನಭಕ್ತನೆನಿಸಲೆಂದಾ ಶಿವನೆ ಕೃಪೆಯಿಂದ-
ಲನುಪಮಾಷ್ಟಾವರಣ ಪರಮ ಪಂಚಾಚಾರಗಳನಾಗಮದೆ ಬೋಧಿಸಿ ||
ಬಿನದದೊಳು ಸಾರಿಹನು ಗುರುಲಿಂಗ ಚರಭಸಿತ-
ಮನಘ ರುದ್ರಾಕ್ಷಮಂತ್ರ ಸುತೀರ್ಥ ವರಶೇಷ-
ಮಿನಿತನನುಗೊಳಿಸಿ ತಾಂ ಗುರಲಿಂಗ ಚರನೆನಿಸಿ ಬಂದಿಹನು ಪೂಜ್ಯನೆನಿಸಿ ||೬||

ಭಸಿತ ರುದ್ರಾಕ್ಷಮಂತ್ರಗಳು ಪೂಜಾಕರಣ-
ವಸಮ ತೀರ್ಥ ಪ್ರಸಾದಗಳು ಪೂಜಾಫಲಗ-
ಳೊಸೆದು ಪೂಜಿಪ ಭಕ್ತನೇ ಪೂಜಕಂ ತಿಳಿದು ಭೋಗಿಪಗೆ ಭಯವಿಲ್ಲವು ||
ಒಸೆದು ಶಾಸ್ತ್ರಗಳಿಂತು ವಿಂಗಡಿಪವದನೊರೆವೆ-
ನಶನ ವಸನ ಸುವರ್ಣ ಮುಖ್ಯ ವೈಭವಕೆಳಸಿ
ವಶನಾಗಿ ಭಕ್ತರಿಗೆ ಜ್ಞಾನಸುಖಮಂ ಮರೆದ ಗುರುವು ಸದ್ಗುರುವಲ್ಲವು ||೭||

ನಿಗಮಾಗಮವನೋದಿ ಶಿಷ್ಯರಿಗೆ ಬೋಧಿಸುತೆ
ಮಿಗೆ ತಿಳಿದುದಂತಾಚರಿಸುತ್ತೆ ಭಕ್ತರನು
ಬಗೆಮೆಚ್ಚಲಾಚರಿಸಲೆಸಗುತ್ತೆ ಚರಿಸುವಾಚಾರ್ಯನಿವನೇ ಸದ್ಗುರು ||
ಸೊಗಯಿಸುವ ಶಿವನಿರುವನವನಿಗಿಂತೀ ನಿಖಿಲ
ಜಗದೊಳಧಿಕರ್ ದೊರೆಯರಾರುಮೆಂದುಂ ಬಗೆಯೆ
ಮಿಗಿಲೆನಿಸಿ ತಾನೆ ನಿಜಗೋತ್ರ ಸೂತ್ರವ ಬಿಡದೆ ಸಲಹುವಂ ಲಿಂಗವಿತ್ತು ||೮||

ಗುರುಸೇವೆಯಂಗೈದ ಶಿಷ್ಯನಿಗೆ ಮುದವಹುದು
ಗುರ ಮಹತ್ವವ ಕೇಳಿರೊರೆಯುವೆನು ನಿಮಗೊಂದು
ಸರಳ ಚರಿತವನೀಗಳೀ ವಿಷಯ ದೃಢತೆಗಾಗಿಯೆ ಕಾಂಚಿಯೆಂಬ ಪುರದೆ ||
ಗುರುಪುತ್ರನೆಂಬ ಬಾಲಕನಿರ್ದನವನ ಪಿತ-
ನುರು ಮಾತೆಯಭಿದಾನ "ಶ್ರೀಕಂಠ ರುದ್ರಾಂಬೆ-
ಯರಿಯಲಹುದವರ ಕುಲಗುರುವು ಶಂಕರ ಶಿವಾಚಾರ್ಯ" ನೆಂಬುವನಿರ್ದನು ||೯||

ಆ ಶಿವಾಚಾರ್ಯನಿಗೆ ಸುತನನೊಪ್ಪಿಸುತವರು-
ಲೇಸು ಮಾಡೈ ದೇವ ಬಾಲನಿವನೆಮ್ಮ ಮಗ
ನೇಸುಕಾಲಕು ಮಲ್ಲಮಿವನು ನಿಮ್ಮ ಪುತ್ರನಿಹನಿವನನುದ್ಧರಿಸಿರಿ ‖
ಈಶ ಸಮ ಗುರು ಚರಣಕೆರಗಿಂತು ಬೇಡುತಿರ-
ಲೀಸು ವಚನವ ಕೇಳ್ದು ಗುರುವರ್ಯನೊಪ್ಪಿಪರ-
ನಾಶಿಷವನವರಿಗಿತ್ತಾನಂದದಿಂ ವಿದ್ಯೆಯಂ ಕಲಿಸಲಾದನವನು ‖ ೧೦ ‖

ಬಾಲನೆಂಟೇ ಬರಿಸದವನಿರ್ದಡುಂ ಗುರುವಿ-
ನೋಲಯಿಕೆಯೊಳು ವೇಳೆಯಂಗಳಿಯುತಿಹನು ತ್ರೈ-
ಕಾಲ ಪೂಜೆಯ ಮಾಡುತುಳಿದ ಸಮಯದೊಳು ವಿದ್ಯೆಯ ಕಲಿಯುತ
ಮೇಲೆ ಕುಳ್ಳಿರಲಿಲ್ಲ ಗುರುಮಠದೊಳಾಗಳುಂ
ಪಾಲಿಸುತೆ ಗುರುವಿನಾಜ್ಞೆಯ ಬಿಡದೆ ಚರಿಸುವನು
ಶೀಲಮೆನಲಾಪ್ತಾಂಗ ಸುಸ್ಥಾನ ಸದ್ಭಾವ ಶುಶ್ರೂಷೆಗಳನಲಸದೆ ‖ ೧೧ ‖

ಗುರುವವನ ಭಕ್ತಿಯನು ಪರಕಿಸಲಿಕೊಂದುದಿನ-
ವೊರೆದ ನೋರ್ವನ ಕರೆದು ಸ್ವಮರಣದ ವಾರ್ತೆಯನು
ಗುರುಪುತ್ರಗರುಹಲ್ಕೆ ತಿಳುಹಿಸಲಿಕೆಲ್ಲವನು ಪರಿಚಾರಕಂ ಪೋಗುತಾ ‖
ಚರನು ಹೊಲದಲ್ಲಿರುವ ಗುರುಪುತ್ರಗದರಂತೆ
ಭರದೊಳುಸುರುತ್ತಿರಲು ಕೇಳಿದಾಕ್ಷಣದೊಳವ-
ನುರುಳಿ ಮೃತಿಯಂ ಪೊಂದಲಾ ಸೇವಕನು ಕಂಡು ಬಂದು
ಗುರುವಿಗಂ ಪೇಳ್ದನು ‖ ೧೨ ‖

ಆಗಳಾ ಗುರು ಧಾವಿಸುತ್ತೆ ಬಂದೀಕ್ಷಿಸುತೆ
ವಾಗತೀತವೆನಿಪ್ಪ ತತ್ಕೃಪಾರಸಮೆಸೆಯ-
ಲಾಗಿ ಕರವಾಡಿಸುತೆ ಮಂತ್ರಮಂ ಧ್ಯಾನಿಸುತೆ ಲಿಂಗಮಂ ಭಾವಿಸುತ್ತಾ ‖
ಯೋಗದಿಂದವನು ಪರವಶನಾಗಿ ಕರಿಯಲ್ಕೆ
ಜಾಗರವನಾಂತೇಳ್ದು ಗುರುಪುತ್ರನೆರಗಲ್ಕೆ-
ಯೋಗಿ ಪಿಡಿದಪ್ಪಿ ನಲವಿಂದೆ ಸುಜ್ಞಾನ ದೀಕ್ಷೆಯನು ಗೈದುದ್ಧರಿಸುತ ‖ ೧೩ ‖

ಕೀರ್ತಿಯನು ಮೆರೆಯಿಸಿದ ಗುರುಮಹಿಮೆಯಿದನರಿದ
ನರ್ಥಕರ ಭವವ ನೀಗುವದು ಲಿಂಗವ ಪಡೆದು
ಸಾರ್ಥಕಂಗೊಳಿಸಿಪುದೀ ಜನ್ಮವನು ಗುರುವಿತ್ತ ತಲ್ಲಿಂಗಮಂ ಧರಿಸುತ ||
ವರ್ತಿಪುದು ಪೂಜಿಸುತೆ ಸರ್ವಸಿದ್ಧಿಯನೊಡೆದು
ಸ್ವಾರ್ಥಮಂ ನೀಗಿ ಶಿವಯೋಗಿ ತಾನಾಗುತ ಯ-
ಥಾರ್ಥವಹ ಸತ್ಪ್ರಾಣಲಿಂಗಮಂ ಜಾನಿಸುತೆ ಭಾವಲಿಂಗವನರಿವುದು || ೧೪ ||

ಲಿಂಗಮೆಂಬುದು ನಮ್ಮ ಚಿತ್ಕಳೆಯ ರೂಪವಿದು
ಭಂಗವಿಲ್ಲದೆ ಗುರುವು ದೀಕ್ಷಾ ಸುಸಂಸ್ಕೃತಿಯ-
ನಂಗ ಸುಶಿಲಾಲಿಂಗಗಳಿಗಿರದೆ ಗೈಯುತ್ತಲೆಮ್ಮ ಶಿಖೆಯೊಳಗೊಂದಿದಾ ||
ಮಂಗಲದ ತೇಜವನು ನಿರ್ಮಲಿನ ಮೂರ್ತಿಯೊಳು
ಪಿಂಗದಲೆ ಶಿವಯೋಗ ಬಲದಿಂದೆ ಸ್ಥಾಪಿಸುತೆ
ಕಂಗೊಳಿಪ ವಸ್ತುವನು ಕರಕಿತ್ತಬಳಿಕೆಮಗೆ ಸೂತಕದ ಭೀತಿಯುಂಟೆ || ೧೫ ||

ಸುಮ್ಮನೇ ಧರಿಸಿದೊಡೆ ಸಾಕು ನಶಿಪುದು ಪಾಪ-
ಮೊಮ್ಮೆ ಭಕ್ತಿಯೊಳಿದನು ಪೂಜಿಪೊಡೆ ಸಿದ್ಧಿಪುದು
ಸಮ್ಯಗೈಶ್ವರ್ಯ ಘನ ಸಿದ್ಧಿಜಯಪದವಮಳ ಭೋಗ ಮೋಕ್ಷಂ ಸಂತತಂ ||
ನಿಮ್ಮ ಪೂಜಿಪುದರಿದು ಜಗವಿದರ ಕುರುಹೆಂದು
ನಮ್ಮ ಪಾತಕ ರೋಗ ದಾರಿದ್ರ್ಯದುಃಖ ಭಯ-
ಮಂ ಮಹೀತಲದೊಳಿರ್ಪಖಿಲ ಭಕ್ತರು ನೀಗುವದು ಭಜಿಸಿರೌ ಲಿಂಗವ ||೧೬||

ಚೌಕವಿರಲಿಲ್ಲದಿರಲೆಂತಾದುಡುಂ ನೀವ-
ನೇಕ ಭೂಷಣಗಳೊಳ್ ತಾಳಿಯಂ ಧರಿಪಂತೆ
ಲೌಕಿಕದೆ ಬಾಳಿರೌ ಧರಿಸಿದನು ನಿಮ್ಮಾತ್ಮಪತಿಯ ಕುರುಹೆಂದರಿಯುತ ||
ಏಕ ಮನದಿಂ ಕೇಳಿರೊಂದು ಕಥೆಯಂ ಪೇಳ್ವೆ-
ನೀ ಕಲಿಯೊಳಾಗಿಹನು ಚೋಳದೇಶದೊಳೋರ್ವ-
ನಾ ಕಲಿಗಣಾಖ್ಯ ನೃಪನೆಂಬ ಶರಣನು ಲಿಂಗಧಾರಣದ ವ್ರತವನಿರದೆ || ೧೭ ||

ಕೈಕೊಂಡು ಲಿಂಗರಹಿತರಿಗವನು ಲಿಂಗಮಂ
ತಾಕಟ್ಟಿಸುತಲಿಹನು ಬೇಡಿದುದ ನೀಯುತ್ತೆ
ಲೋಕಂಗಳೊಳು ಮಾನ್ಯವಾಗಿ ಬಾಳುತಲಿಹನು ಲಿಂಗವೇ ತಾನಾಗುತ ॥
ಈ ಕೀರ್ತಿಯೆಲ್ಲೆಡೆಯೊಳುಂ ಪಸರಿಸುತ್ತಿರಲು
ಸಾಕಾರನಾಗಿ ಒಕ್ಕಲಿಗನುರು ವೇಷವುಂ
ಸ್ವೀಕರಿಸಿ ಪರಶಿವನು ಚರಿಸುತಿರಲರಮನೆಯ ಬಳಿಯಲ್ಲಿ ಸ್ವೇಚ್ಛೆಯಿಂದ ॥ ೧೮ ॥

ಗುಪ್ತಚಾರರು ನೋಡುತಾತೆಂದು ಕೇಳಲಾ-
ಗುತ್ತರಿಸಿದಂ ಶಿವನು ತಾನು ಲಿಂಗಾಂಗಿಯೆನ-
ಲುತ್ತರವ ಕೇಳ್ದು ಸೇವಕರು ತವ ಲಿಂಗವೆಲ್ಲಿದೆಯನಲು ಹರನು ನುಡಿದ ॥
ಉತ್ತಮರೆ ನೀವೆನ್ನ ಲಿಂಗಮಂ ಕೇಳಿದಿರಿ
ದೀಪ್ತಾಗ್ನಿಯಂತಿರುವದೆಮ್ಮ ದೈವತ ಕುಲವು
ತಪ್ತವಾಗುತ್ತೆ ಕೊಲ್ಲುತಿಹುದು ಮನೆಯೊಳಗೋರ್ವನುಂ ಲಿಂಗಮಂ ಧರಿಸಲು॥೧೯॥

ಆಗಳವರೆಳೆದೊಯ್ದರವನನರಸನ ಬಳಿಗೆ
ಪೋಗಿನಿಂದನು ಶಿವನು ನೃಪನ ಸನ್ನಿಧಿಯಲ್ಲಿ
ಬಾಗಿ ಪೇಳ್ದರು ತೋರಿ ಚಾರರೀ ವಿಷಯವನು ನೃಪತಿಗಾನಂದದಿಂದ
ರಾಗದಿಂ ರಾಜನಾ ಕಪಟ ಶಶಿಶೇಖರನಿ-
ಗಾಗಮವಿಚಾರಮಂ ಸಾಮದಾನದೆ ಪೇಳ್ದು
ರೇಗ್ಗಿದನು ಖಡ್ಗಮಂ ಪಿಡಿದು ನಿಜಶಾಸನವ ಧಿಕ್ಕರಿಪ ಹರನ ಕೊಲಲು ॥ ೨೦ ॥

ನೋಡಿ ಶಂಕರನು ಧಾವಿಸುತಿರಲು ಕಲಿಗಣನು
ಕೂಡಿ ಕೋಪಾತಿಶಯದಿಂದೆ ಬೆಂಬತ್ತಿರಲು
ನಾಡಗಡಿಮೀರುವನಕಾ ಗಿರಿಶ ನೋಡಾಡುತಿನ್ನಿವನು ಬಾರನೆಂದು ॥
ಕಾಡಿ ಸಿಗಲರಸನಿಗೆ ಖಡ್ಗಮಂ ಶಿರಕೆಸೆಯೆ
ನಾಡೆ ಶೂಲಿಯ ಕಪಟ ರೂಪವೆಲ್ಲವು ಮಾಜಿ
ಮೂಡಿತಾಕ್ಷಣವೈದು ಮೊಗವರಿಯೆ ಶಶಿಮುಡಿಯು ಮುಕ್ಕಣ್ಣು ದಶಭುಜಮದು ॥ ೨೧ ॥

ಪದಯುಗವು ಶಂಕರಗೆ ಮೆರೆಯಲ್ಕೆ ಪರಶಿವನು
ಸದಮಲನೆ ನಮಿಸು ವರಮಂ ಬೇಡೆನುತ್ತುಸುರೆ
ಪದುಳದಿಂದೆ ನೃಪನು ಹರನಿಗುಸುರಿದನೀಗಳೆರಗುವೆನು ಲಿಂಗವನ್ನು ||
ಮುದದಿಂದೆ ಧರಿಸೆನಲ್ಕಭವನಿಗೆ ಪೇಳ್ದ-
ನೊದವಿ ಗುರುರೂಪದಿಂದಾನೆ ಲಿಂಗವನೆಸೆದು
ಸದಯ ಮಾನಸದಿಂದೆ ಜನಕೀವೆನೆನಗಾವ ಗುರುವು ಧರಿಸುವನೆಂದೆನೆ || ೨೭ ||

ಧರಿಸಿಕೊಳ್ಳಲು ನೀನು ಸಿದ್ಧನಾಗಿರುತಿರಲು
ಧರಿಪೆನಾಂ ನಿನಗೆ ಲಿಂಗವನೆಂದು ಕಲಿಗಣನು
ಹರಸಿಗಳುಕದಲೆ ನುಡಿಯಲ್ಕೆ ಮುದದಿಂ ಶಿವನು ಧರಿಸೆಂದು ನುಡಿಯುತಿರಲು ||
ನೆರೆನಗುತೆ ಕ್ಷಿತಿವರನು ಗಿರಿಶನಂ ನೋಡುತೆನ-
ಗೆರಗದಲೆ ನಾನೆಂತು ಧರಿಪೆನೆನಲಾ ಮೃಡನು
ಹರುಷದಿಂ ಭೂಪತಿಗೆ ವಂದಿಸುತೆ ಗುರುವೆ ನಿಜಶಿಷ್ಯನಿಗೆ ಲಿಂಗವಿತ್ತು || ೨೩ ||

ಪಾಲಿಸುವದೆಂದೆನಲು ಪರಮ ಕಲಿಗಣನಾಥ-
ಲಾಲಿಸುತೆ ಶಿವನ ಕೈಂಕರ್ಯಮಂ ನಿರುಕಿಸುತೆ
ಲೀಲೆಯೊಳು ಶಿವದೀಕ್ಷೆಯಂ ಮಾಡಿ ಸಿತಿಕಂಠಗಿತ್ತು ಶಿವಲಿಂಗವನ್ನು ||
ಕಾಲ ಕಾಲನು ಹೊಂದಿ ಹರುಷಮಾನಸನಾಗು-
ತೋಲೈಸಿ ಪರಮ ಕಲಿಗಣನಾಥಗೀಯುತ್ತೆ
ಕೈಲಾಸದೊಳು ವಿಮಲ ಗಣನಾಥನುರುಪದವ ಕರುಣಿಸಿದನಲ್ಲಿಯಿಂದ || ೨೪ ||

ಇಂತು ಶಿವಘೋರತನುವಿಗಘೋರ ತನುವೆನಿಪ-
ನಂತ ಲಿಂಗವ ಧರಿಸಿ ಹರಗೆ ಗುರುವಾಗಿರ್ಪ
ಶಾಂತ ಕಲಿಗಣನಾಥರುರು ಕಥೆಯ ಕೇಳಿದಿರಿದೀಗಳರಿಯಿರಿ ಲಿಂಗದಾ ||
ಅಂತವಿರಹಿತ ಚೇತನದ ಮಹಿಮೆಯಂ ಪೇಳ್ವೆ-
ನಂತದಕೆ ಜಂಗಮವೆನಿಪ್ಪ ನಾಮವದುಂಟು
ಭ್ರಾಂತಿಹರ ಸುಜ್ಞಾನ ರೂಪವದು ತದ್ಬೋಧಮಂ ಮಾಳ್ಪ ಸುಜ್ಞಾನಿಗೆ || ೨೫ ||

ಜಂಗಮಾಹ್ವಯ ಮೆಸೆವುದಾ ವಿರತಿಯೀ ಯಿವನ
ಸಂಗಡದ ಸಂಪದವು ಸದ್ಗುಣಗಳೇ ಇವನ
ಸಂಗಡಿಗರಾಗಿಹವು ಜ್ಞಾನಾಮೃತ ಪಾನದಿಂ ನಿತ್ಯ ತೃಪ್ತನಹನು ॥
ಭಂಗವಿಲ್ಲದೆ ಸುಳಿವ ಗಾಳಿಯಂದದೊಳಿವನು
ಪಿಂಗದಲೆ ಚರಿಸುವನು ನಿರ್ಲಿಪ್ತನಾಗಿಹನು
ಮಂಗಲದ ಸುವಿರಕ್ತ ಸಂಸ್ಕಾರಗಳನೈದಿ ಜ್ಞಾನಗುರುವೆಂದಿನಿಪನು ॥ ೩೬ ॥

ಇವನಿಗಿಲ್ಲಾ ಗುರುವಿನೊಲು ಗೋತ್ರಸೂತ್ರಗಳ
ಬವಣೆಗಳು ಶರಣಾಗತರ್ಗಿವನೆ ರಕ್ಷಕನು
ಶಿವನರಿವನುಪದೇಶಿಸುವದಿವನ ಕರ್ತವ್ಯಮೀತನೆ ನಿರಾಭಾರಿಯು ॥
ಅವನಿಯೊಳು ಗುರುವಿಗಂ ಗುರುವಹನು ಪರಕಿಪನು–
ತವೆ ಸದಾಚಾರ್ಯನೆಸಗಿರುವ ಕಾರ್ಯಂಗಳನು
ಭವಬಂಧ ವಿರಹಿತನು ಪ್ರತ್ಯಗಾತ್ಮಾಕಾರ ಸರ್ವಸಾಕ್ಷಿಗೆ ಮೂಲನು ॥ ೩೭ ॥

ಈತನ ಮಹಾಲೀಲೆಯಂ ನಿಮಗೆ ಪೇಳುವೆನು
ಪ್ರೀತಿಯಿಂದಾಲಿಸಿರಿ ಜವನಿಕಾಪುರದಲ್ಲಿ
ಖ್ಯಾತನಾಗಿರ್ದತಿಶಾಂತನಮಲ ಜ್ಞಾನಿಯೆಂಬ ಜಂಗಮ ಮೂರ್ತಿಯು ॥
ವೀತರಾಗನು ಪರಮ ಶಿವಯೋಗಿಯೆಂದೆನಿಸಿ
ಸಾತಿಶಯಮೆನಲು ಭಕ್ತೋದ್ಧಾರ ತತ್ಪರನು
ನೀತಿ ಧರ್ಮಜ್ಞಾನ ಬೋಧಕಂ ತಾನಾಗಿ ಸಂಚರಿಪನೀ ದೇಶದೆ ॥ ೩೮ ॥

ಇವನ ಪಾದದ ಮಹಿಮೆ ಇವನ ಪಾಣಿಯ ಮಹಿಮೆ
ಇವನ ವಾಣಿಯ ಮಹಿಮೆ ಇವನ ನೇತ್ರದ ಮಹಿಮೆ–
ಯವಿನಾಶಿಯಾಗಹುದು ಬಣ್ಣಿಸುವರಾರದನು ಪೇಳ್ವೆನಾವಾಗ್ಲೀಲೆಯ ॥
ಅವಿನೀತನೋರ್ವನುರು ವೀರಶೈವನುಮೆನಿಸಿ
ಶಿವಲಿಂಗಮಂ ತೊರೆದು ತಿರಗುತ್ತಲಿರ್ದನಾ–
ಶಿವಯೋಗಿಯುದ ನೀಕ್ಷಿಸುತೆ ಬೋಧಿಸಿದನಾಗಳಿಷ್ಟ ಲಿಂಗದ ನೆಲೆಯಾ ॥ ೩೯ ॥

ಕೇಳದಿರಲಾ ನರನು ಯತಿಯು ಶಪಿಸಿದನಿಂತು
ಬಾಳದಿರು ನೈಜಧರ್ಮದ್ರೋಹಿ ಸೀನೆನಲು
ಖೂಳನವನದನುಲಕ್ಷಿಸದೆ ಪೋಗುತ್ತಿರಲು ಸರ್ಪವದು ಬೆಂಬತ್ತಲು ||
ತಾಳಿ ಖೇದವನಾ ಮನುಷ್ಯ ನೋಡುತೆ ಬಂದು
ಬೀಳಲಾ ಶಿವಯೋಗಿ ಪದದಲ್ಲಿ ಪೊರೆಯೆಂದು
ಲೀಲೆಯಿಂ ಚರವರನು ಭುಜಗಂ ನೋಡಲ್ಕೆ ತಳುವದಡಗಿತು ಫಣಿಯದು ||೩೦||

ಆಗಳಾ ಮಾನವನು ನಮಿಸಿ ಚರವರ ಪದಕೆ
ರಾಗದಿಂದಿಷ್ಟಲಿಂಗವ ಧರಿಸಿ ಸದ್ಭಕ್ತ-
ನಾಗಿ ಸೇವಿಸುತಿರ್ದನನುಮಿತ ಭಕ್ತಿಯೊಳು ಫಲಿಸುತಿರಲಾ ಸೇವೆಯು ||
ಯೋಗಿಯಾದನು ಭಕ್ತನಾ ಚರನ ಕೃಪೆಯಿಂದ
ಸಾಗಲಾಗಿಹವಾತನಿಂ ಮಹಿಮೆಗಳು ಸಕಲ
ರಾಗಿ ರೋಗಿಗಳಲ್ಲಿ ಬರತೊಡಗದರ್ ಕ್ಷಣವೆ ಸಿದ್ಧನಾದನು ಭಕ್ತನು ||೩೧||

ಇದು ಜಂಗಮದ ಮಹಿಮೆಯಾ ಜಂಗಮದ ಪಾವ-
ನದ ತೀರ್ಥದಿಂ ಶುದ್ಧವೆನಿಸಿರ್ಪ ಭಸಿತವನು
ಪದುಳಿದಿಂ ಬಣ್ಣಿಸಲದಾರ್ಗೆ ಸಾಧ್ಯಂ ಶಿವನ ಪಂಚಮುಖದಿಂದ ಜನಿಸಿ ||
ವಿದಿತಮಾಗೈದು ಗೋವುಗಳ ಸಂತತಿಯಿಂದ-
ಲುದಿತಮಾಗಿಹ ಪೂತ ಗೋಮಯದ ಸಾರದಿಂ
ದೊದವಿಹುದು ಪರಶಿವನ ವೈವೆಳಗುತಾ ನೆನಿಸಿ ರೋಗ ಭಯದಿಂ-
ಪೊರೆಯುತ ||೩೨||

ಹಿತವಿದೇ ಸಕಲ ಲೋಕದ ಜನಕೆ ಮತವಿದೇ
ಶೃತಿ ಪುರಾಣದ ಗತಿಯಿದೇ ಭಕುತಿಯ ಬೆಳಗಿನು-
ನ್ನತಿಯಿದೇ ಶ್ರೀ ವಿಭೂತಿಯನೊಲಿದು ಧರಿಸುವೊಡೆ ಭವವ ಪರಿವುದು ದುರಿತದ ||
ತತಿಯ ತೊಡೆವುದು ಹರನ ಸಾಲೋಕ್ಯ ಸಾಮೀಪ್ಯ-
ದತಿಶಯದೊಳಿರಿಸುವದು ನಿರುತವಿದನೇ ನಂಬು
ನೃತಿಭೀತಿಯ ಮನಭಯದಿಂದೆ ತಾರಿಪುದಗಸ್ತ್ಯಾದಿ ಮುನಿಗಳು ಧರಿಪರು ||೩೩||

ಶ್ರೀಶೈಲ ವರಚನ್ನಮಲ್ಲಿಕಾರ್ಜುನನೊಲಿಪ
ಭಾಸುರವಿಭೂತಿಯಿದೆ ಕೇಳಿರಿದಕೀ ಕಥೆಯ
ಲೇಸೆನಿಸಿ ಮೆರೆಯುವಮರಾವತಿಯ ಪುರದಲ್ಲಿ ಖ್ಯಾತನಾಗಿಹನೋರ್ವನು ॥
"ಶ್ರೀಶವರ್ಮಾ" ಹ್ವಯನು ಮಂಗಲಾನಾಮಸುವಿ-
ಲಾಸಿನಿಯ ಕೈವಿಡಿದು ಭೋಗದೊಳಗಿಂದ್ರನನು-
ದಾಸಿಪನು ವೈಷ್ಣವನು ತಾನಾಗಿ ಶಿವಭಕ್ತರಂ ಪಳಿಯುತಿರ್ದನವನು ॥ ೩೪ ॥

ಒಂದು ದಿನಮೋರ್ವ ಶಿವಭಕ್ತನುರು ಭಸಿತವನು
ಛಂದದಿಂ ತ್ರೈಪುಂಡ್ರಮಾಗಿ ಶೋಭಿಸುವಂತೆ
ತಾಂ ಧರಿಸಿಕೊಂಡವನ ಮನೆಗೆ ಕಾರ್ಯಾರ್ಥಮಾಗೈದಿ ಕುಳ್ಳಿರೆ ಕಾಣುತ ॥
ನಿಂದಿಸತೊಡಂಗಿದನು ತದ್ವಿಭೂತಿಯ ನಿಂತು
ಮಂದತನವೆನಿತು ನಿಮ್ಮಯ ಧರ್ಮ ಗುರುವಿನೊಳು
ನಿಂದ್ಯಪಶುವಿನ ಶಗಣೆಯಂ ಪಣೆಗೆ ತಿಕ್ಕಪೇಳಿರುವದೆಲ್ಲಿಯ ರೀತಿಯು ॥ ೩೫ ॥

ಆ ಗೋಮಯವ ಧರಿಸಲ್ನಾಚಿ ಬೂದಿಯ ಮಾಡಿ
ಸೋಗಿನಿಂ ಧರಿಸುತ್ತೆ ಬಣ್ಣಿಸುವದಾದೊಡೇಂ
ಲೋಗರ್ಕಳರಿಯದಿಹರೇನಿದರ ಮರ್ಮವನು ಒರಿಸು ನಾನೋಡೆನೆನಲು ॥
ಮೂಗನಂದದೆ ಮುಗ್ಧ ಭಕ್ತನೈತರಲು ಮನೆ-
ಗಾಗಳಿಂದಾ ವೈಷ್ಣವನ ತನುವದಂತು ಬಿ-
ಳ್ಪಾಗಿ ಶೋಭಿಸಲಾಯ್ತು ತನ್ನುಪಳ್ತಿರುವದೆಂದವನ ಮನೆಯುವರು ಮರುಗಿ ॥೩೬॥

ವೈದ್ಯರಿಗೆ ತೋರಲಾದರು ಮಡದಿ ನೆರೆಮುಟ್ಟ-
ಲೆದ್ದೆಣಿಸತೊಡಗಿದಳು ಗಂಗಾಳ ತಂಬಿಗೆಯ
ಸದ್ಯದೊಳು ತಾವೆ ಬೇರ್ಪಡಿಸಿದರು ತಿಳಿದು ಜನರಾಗ ದೂರಿರಲಾದರು
ಉದ್ಯಮವ ತೊರೆದು ಚಿಂತಿಸಲಾದನನುದಿನದೆ
ವೇದ್ಯವಾಗಲಿಕವನ ಮನವ ಪರಿಕಿಪನಂತೆ
ಹೃದ್ಯ ಭಸಿತವ ಧರಿಸಿಕೊಂಡು ಮತ್ತೈದಿದನು ಸಹಜಮೆನಲಾ ಭಕ್ತನು ॥೩೭॥

ಬರೆಕೆಂಡು ಸಿರಿವಂತನಾದರಿಸಿ ಕುಳ್ಳಿರಿಸಿ
ಯೊರೆಯಲಾ ಶ್ವೇತಕುಷ್ಟದ ವೃದ್ಧಿಯನು ಸ್ತ್ರೀಯ
ಪರಿವಾರದಿಂ ತನಗೆ ಜರಗುಪಪವಮಾನವನು ತಿಳಿಸೆ ಶಿವಭಕ್ತನೊರೆದಾ ||
ವರಭಸಿತಮಂ ಕೊಡುವೆ ನೀಂ ಸ್ನಾನಮಂಗೈದು
ಧರಿಸು ನಿತ್ಯಂ ಬಿಡದೆ ಸುಖಮಾಗುವದು ನಂಬು
ನಿರುತದೆನ್ನಾಲಯಕೆ ಬಂದು ಸದ್ಭಕ್ತಿಯೊಳು ಧರಿಪುದೈ ಪೂಜಿಸುತ್ತ ||೩೮||

ಎಂದು ಪೇಳುತ್ತ ಪೋಗಲ್ಕೆ ಶ್ರೀ ಶೋತ್ರಮನು
ಸಂದೆಗದ ಕಲ್ಪನೆಯ ತೊರೆದು ಸ್ನಾನಂಗೈಯು-
ತ್ತಿಂದುಧರನಾಮು ಶಿವಭಕ್ತನಿಲಯಕೆ ಬಂದು ರೋಗವಂ ಕಳೆಯನ್ನುತ ||
ಹೊಂದಿ ಯಾಚಿಸಲು ಮೊರೆಯುಂಕೇಳಿ ಕುಳ್ಳಿರಿಸಿ
ಕಂದುಗೊರಲನ ಜಾನಿಸುತ್ತೆ ನವಭಸಿತವನ-
ಮಂಡೆ ಮುದದಿಂದಿತ್ತು ಧರಿಪ ನೀತಿಯನರುಪಿದಂ ಸದ್ಗುಣಾರ್ಣವಶಶಿ || ೩೯ ||

ಒರೆದಂತೆ ವೈಷ್ಣವನು ಶ್ರದ್ಧೆಯೊಳು ಭಸಿತವನು
ನಿರುತಂ ನಿಜಾಂಗಕ್ಕೆ ಧರಿಸಲೊಡನೈದುದಿನ
ಪರಿದೆನಲ್ ಕಳೆಯಲ್ಕೆ ರೋಗಮುಕ್ತತೆಯಾಗಿ ಕಂಗೊಳಿಸಿತವನ ತನುವು ||
ನಿರುಕಿಸುತಲಿಂದುಧರ ಶರ್ಮನಾ ಶ್ರೀಶೋತ್ರ-
ಮರುಜಾನ್ವಿತಾಂಗಮಂ ನೋಡಿ ಸಂತಸಬಡಲು
ಹರಿಭಕ್ತನಾ ಪರನು ಹರಭಕ್ತನೆಚ್ಚರಿಸೆ ನಮಿಸಿ ಬಣ್ಣಿಸಲಾದನು || ೪೦ ||

ಅತಿಮಂದನತಿಮೂಢನತಿಮೂರ್ಖ ನಾನಾಗಿ-
ಯತುಲ ಶಿವಲಾಂಛನವ ಪಳಿದು ದುಷ್ಪಾಪಿ ದುರ್-
ಮತಿಯು ನಾನೆನಿಸುತೀ ರೋಗಕೆಡೆಯಾಗಿರ್ದೆನರಿದು ನೀನೆನ್ನ ಪೊರೆದೆ ||
ಪಿತನಿಂದೆ ಸಖನಿಂದೆ ಗುರುವಿಂದೆ ನೀನಧಿಕ-
ನತಿಶಯಂ ಘನದೈವದಿಂದೆ ನೀನಾಗಿರುವೆ
ಹಿತರಾರು ನನಗಿಲ್ಲ ಬಂಧು ಬಾಂಧವರಿಲ್ಲ ನೀನೇ ಸರ್ವಸ್ವವೆನಗೆ || ೪೧ ||

ಎನುತೆ ಮತ್ತೆರಗಿರ್ಪ ಸಿರಿವಂತನಂ ನೋಡಿ
ವಿನುತೇಂದು ಧರನಾಮವನು ಪಿಡಿಪಳ್ಕರಿಂ-
ದಿನಿವ ಶಿನಿಂದಿಂತು ಪೇಳಲಾದನು ಭೂತಿಮಾಹಾತ್ಮೆಯಂ ತಿಳಿಸುತ ||
ಅನಘನಾಗಿರುವೆ ನೀನಿನ್ನು ನಿಂದಿಸಬೇಡ
ಘನಧರ್ಮ ಚಿನ್ಹಗಳುಮಾವಿರ್ದಡವು ಶ್ರೇಷ್ಠ-
ವೆನಿಸುವವು ನಿನ್ನ ಗೋಪೀಚಂದನನವದೆಂತು ಮುಖ್ಯವೊ ಲಿಂಗಿಗೆ || ೪೨ ||

ಶತಗುಣಾಧಿಕಮಹುದು ಭಸಿತವರಿಯದರಿಂದೆ
ಹಿತವೆನಿಸಿ ನಿನಗಿದರ ದೃಂಷ್ಟಾಂಮಾಗಿಹುದು
ಕ್ಷಿತಿಯೊಳಾರೀ "ಗೋ" ಮಹತ್ವವನು ತಿಳಿದಿಲ್ಲವವರು ನಿಂದಿಪರರಿಯದೆ ||
ಶೃತಿಯು ಪೇಳ್ವುದುದೇನು ದೇವಾಯತನವೆಂದು
ಮತವಿದೆಲ್ಲರ ಮನಕೆ ಸಲೆವಿಚಾರಿಸು
ಮಿತಿಯಿಲ್ಲದಮೃತವೀಯುವದೆಂದು ಹರಿಯರಿದು ಗೋವಿಂದ ಗೋಪಾಲನು ||೪೩||

ಎನಿಸಿ ಮೆರೆದನು ನಿನಗೆ ದೇವರಾಗುತಲವನು
ಘನಭಸಿತಮಂ ಪಳಿದು ರೋಗಿಯೆನಿಸಿದೆ ನೀನು
ಜನರೊಳಗೆ ನಿಂದಕನು ಚಾಂಡಾಲನೆನಿಸುವನು ಮಾಡದಿರು ನೀಂ ನಿಂದೆಯ ||
ವಿನುತ ಗೋಮಯವರಿಯಲಪವಿತ್ರವಲ್ಲವದು
ಮನುಜನಾವನು ಕೆಡಲು ಗೋಮಯದೆ ಶುದ್ಧಿಸುವ-
ರನಘ ಗೋಮಯವಿದನು ಕೀಳೆನುತೆ ಬಗೆಯದಿರು ಸುಡಲದುವೆ
ಬೂದಿಯಹುದು || ೪೪ ||

ಬೂದಿಗಿಲ್ಲಂ ವಿಕೃತಿ ಜಗವೆಲ್ಲ ಸವಿಕಾರಿ
ಬೂದಿ ಶಬ್ದವೆ ಸಂಸ್ಕೃತದೆ ಭೂತಿಯೆನಿಸುವದು
"ಬೂದಿ" ಇದರರ್ಥವೈಶ್ವರ್ಯವಂದಾಗುತಿಹುದೈಶ್ವರ್ಯ ಶಬ್ದವರಿಯೆ ||
ಶೋಧಿಸಲ್ಕೀಶ್ವರನ ರೂಪವೆಂದಾಗುವದು
ಶೋಧಿಸಲ್ಕೀಶ್ವರನು ಜಗದರೂಪಾಗಿಹನು
ಶೋಧಿಸಲ್ ಜಗವೆಲ್ಲ ಬೂದಿಯಾಗುವದೊರ್ವೆ ಬೂದಿ ಗೋಮಯಲ್ಲವೆ ||೪೫||

ಎಂಬ ಬೋಧೆಯ ಕೇಳ್ದು ಹರುಷಜಲಧಿಯೊಳಾಳ್ದು
ಸಂಬುಗೆಯೊಳಾ ಯಿಂದುಧರ ಶರ್ಮನಂ ಧರೆಯ-
ಸಾಂಬಸಿವನೆಂದರಿದು ಮನ್ನಿಸುತೆ ಸದ್ಭಕ್ತಿಯೋಳ್ ಬಾಳ್ದನವನು ನಂಬಿ ‖
ಅಂಬುಜಾನನೆಯರ್ಗೆ ಕಥೆಯನಿಂತೊರೆಯುತ್ತೆ-
ಪಂಬಲಂ ಪೆರ್ಚಲ್ಕೆ ಮತ್ತೊರೆಯುತೊಡಗಿದಳು
ಶಂಭುವಂ ಜಾನಿಸಿ ಮಹಾದೇವಿಯಕ್ಕನುರು ರುದಾದ್ರಾಕ್ಷಮಹಿಮೆಯನ್ನು ‖ ೯೩ ‖

ತಾಯಿಗಳಿರಾ ನೀವು ರುದ್ರಾಕ್ಷಗಳನೊಲಿದು
ಕಾಯದೊಳು ಧರಿಸಿರೌ ಭೂತ ವೈಶಾಚಿಕದ
ಮಾಯೆನಿಮಗಾಗದೌ ಯಮನ ಕಿಂಕರರಾದೊಡೀಶರೀರವ ಮುಟ್ಟರು ‖
ಮಾಯಿಕಾಸುರರೊಮ್ಮೆ ಬ್ರಹ್ಮನಿಂ ವರವೈದಿ
ಸಾಯಸದೊಳಾಗಸದೆ ತ್ರಿಪುರಗಳ ನಿರ್ಮಿಸುತೆ
ನ್ಯಾಯವಿಲ್ಲದೆ ಕಾಡತೊಡಗಿದರು ಜಗವನ್ನು ಪೇಳ್ವುದೇನಾ ಕಥೆಯನು ‖೪೭

ಯಜ್ಞಪೂಜಾದಿಗಳ ಫಲವನಸುರರು ಕೊಳ್ಳು-
ತಜ್ಞತನದಿಂ ತಾವೆ ದೇವರ್ಕಳೆಸುತ್ತೆ
ಸುಜ್ಞ ದೇವತೆಗಳನು ಕಾರಾಗೃಹದೊಳಿಟ್ಟು ತನ್ನಾರಿಯರ ಮಾನವ ‖
ಅಜ್ಞರಾಗಪಹರಿಸ ತೊಡಗಿದರು ಛಲದೆ ಸ-
ರ್ವಜ್ಞ ಪರಮೇಶ್ವರನದಂ ಕಂಡು ನಿಜಶಕ್ತಿ
ಸಂಜ್ಞೆಯಿಂ ರುದ್ರರೂಪವ ಧರಿಸುತಗ್ನಿನೇತ್ರವ ತೆರೆದು ನಿಂದಿರಲ್ಕೆ ‖ ೪೮ ‖

ನೇತ್ರದಾಯಾಸದಿಂದಶ್ರುಗಳ್ ಸುರಿಯಲ್ಕೆ
ಚಿತ್ರವೆನಲುದಿಸಿವವು ವೃಕ್ಷದಾಕ್ರತಿಯೊಳವು
ತತ್ತ್ರಿಪುರ ದಹನ ಕಥೆಯೆಸೆದಂತೆ ಯೆಸೆದಿಹವು ರುದ್ರಾಕ್ಷನಾಮವಡೆದು ‖
ಕೃತ್ರಿಮವಿದಲ್ಲವರಿಯಿರಿ ವೇದದೊಳಗಿಹ ಚ-
ರಿತ್ರವಿದನರಿದು ನೀವನವರತಂ ಧರಿಸುತ್ತೆ
ಶತ್ರು ಪೈಶಾಚಕಾಲಾದಿಗಳ ಬಾಧೆಯಿಂ ಗೆಲ್ಲಿರೌ ನಂಬಿ ನಿರುತ ‖ ೪೯ ‖

ಕೇಳಿರಿದಕೊಂದು ಪೌರಾಣದೊಳಗಿಹ ಕಥೆಯ
ಪೇಳುವೆನು ಧರ್ಮಪುರವೆಂಬ ಪಟ್ಟಣದಲ್ಲಿ
ಶೀಲಸದ್ಗುಣದಿಂದೆ ಶೋಭಿಸುವನೋರ್ವಮಾಹೇಶ್ವರಂ ಸೋಮಾಖ್ಯನು ॥
ಪಾಲಿಸುತ್ತಿರಲಖಿಲ ಭಕ್ತಾದಿಗಳವರಲಿ
ಕಾಲಪತಿಯೆಂಬ ಸದ್ಭಕ್ತನಿರುತಿಹನವಗೆ
ಕಾಳಮುಖಿಯೆಂದೆಂಬಪತ್ನಿಯಿರುತಿಹಳಾಕೆ ಪತಿಧರ್ಮವಿರೋಧಿನಿಯು ॥೫೦॥

ಅವನು ಗುರುಲಿಂಗಜಂಗಮಪೂಜಕಂ ತಿಳಿಯ-
ಲವಳು ಮಾರಿಮಸಣೆಯರಂ ಪೂಜಿಪಳ್ ತಿಳಿಯ-
ಲವನು ಪಾದೋದಕವ ಸುಪ್ರಸಾದವ ಕೊಳ್ವನವಳು ಮದಿರಾಮಾಂಸವಂ ॥
ಅವನು ವಿತ್ತಾದಿಗಳ ಗುರುಚರರಿಂಗರ್ಪಿಸುವ
ನವಳು ವಿತ್ತಾದಿಗಳ ಪೂಜಕರಿಗರ್ಪಿಸು-
ವವನು ಸಜ್ಜನನಾಗಿ ಯವಳು ದುರ್ಜನಳಾಗಿ ನಡಿಸುವರ್ ಸಂಸಾರವಾ ॥೫೧॥

ಹೀಗಿರಲು ಪತಿವಿರೋಧದ ಫಲವೊಯೆಂದೆನಲು
ವೇಗದಿಂ ಪೈಶಾಚಮೊದವಿಕಾಡುತಿರಲ್ಕೆ
ವಾಗತೀತವೆನಿಪ್ಪ ಬಾಧೆ ಸತಿಗಾಗಲ್ಕೆ ತತ್ಪತಿಯು ಮಹಕ್ಕೈದುತ ॥
ಆಗಳಾಮಾಹೇಶ್ವರಂಗೆ ನಮಿಸುತೆ ಪೇಳೆ
ರಾಗದಿಂ ಸೋಮಾರ್ಯನಾಲಿಸುತೆ ಕನಿಕರದೆ
ಯೋಗಪೂತ ಸುಹಸ್ತದಿಂದೊಂದು ರುದ್ರಾಕ್ಷಿಯಂ ಕರುಣೆಯಿಂದೀಯುತ ॥೫೨॥

ಮತ್ತಿಂತು ಪೇಳಿದನು ಬಂಧಿಸಿದನಿಂತು ಗೈ-
ಸುತ್ತೆಸ್ನಾನವ ಪೂಜಿಸುವದು ಭಕ್ತಿಯೊಳೆನಲು
ಭಕ್ತನತುಲ ಶ್ರದ್ಧೆಯಿಂಕೊಂಡು ವಂದಿಸುತಲೈದಿದನು ಮನೆಗಾಗಳೆ ॥
ಚಿತ್ತವಿಟ್ಟೆಲ್ಲ ವಿಷಯವ ಸತಿಗೆ ತಾನೊರೆದು
ಭಕ್ತಿಯಂ ಪುಟ್ಟಿಸುತೆ ಬಂಧಿಸಲು ತತ್ಕ್ಷಣದೆ
ವ್ಯಕ್ತಮೆನೆ ತೊಲಗಿತೆಂದುಂಬಿಡದ ಭೂತಚೇಷ್ಟೆಯರಿಯಲ್ಕೆಲ್ಲರು

ಈ ಮಹಿಮೆಯಿಂದವಳ ಸದ್ಭಕ್ತಿಬೆಳೆಯಲ್ಕೆ
ಸೋಮಾರ್ಯಸುರುಮುಠಕೆ ಹೋಗತೊಡಗಿದಳುವಳು
ರಾಮಣೀಯಕಮಾದ ಗುರುಬೋಧೆಯಂ ಪಡೆದು ಧರ್ಮಕ್ಕೆ ಮನವಿತ್ತಳು ||
ಭಾವಿಸಿಯು ನೀತಿಯಿಂ ನಡಿಯಲಾದಳು ಖಿಡದ-
ಲೀ ಮಹಾಸದ್ವೀರಶೈವ ತತ್ವವನರಿತು
ಪ್ರೇಮದಿಂ ಆಕರಿಸಲಾಗಿಹನು ಸದ್ಗುರುವಿನಾಶೀರ್ಮಹತ್ವವದೆಂ ತುಟೊ || ೫೮ ||

ಇಂತು ಕೇಳಿದಿರಿ ರುದ್ರಾಕ್ಷಗಳ ಮಹಿಮೆಯನು
ಶಾಂತೆಯರೆ ನೀವರಿಯಿರೀಗ ಮಂತ್ರದ ಕಲೆಯ
ಸ್ವಾಂತದೊಳು ಮನಮಾಡುವದೀ ಷಡಕ್ಷರ ಮಹಾಮಂತ್ರವನು ಭಕ್ತನು ||
ಕಾಂತ ಸದ್ಗುರುವಿನುಪದೇಶದಿಂದರಿಯುತಂ
ಕಂತುಹರ ನಿಜನಾಮವೆನುತ ಭಾವಿಸಿಶ್ಯೆ
ಕಾಂತದೊಳು ವಾಚಕೋಪಾಂಶು ಮಾನಸಗಳಿಂ ಶುಚಿಯಾಗಿ ಜಪಿಸಿರಿದನು ||೫೯||

ಅರಥ್ವಗಳಿಗಿಂಬುವಡೆಯುತೀ ವಿಶ್ವದಾ-
ಧಾರ ವೆನಿಸುತ್ತವೋಂಕಾರಬೀಜವಪಿಡಿದ-
ಪಾರಮಹಿಮೆಯೊಳೆಸೆವುದೀ ಷಡಕ್ಷರ ಮನುವಿದಂಗಲಿಂಗೈಕ್ಯಾರ್ಥದಾ
ಸಾರತೆಯನಾಂತುಪಂಕ್ತಿಛಂದನುಂತಿಾಳ್ದು
ಮಾರಹರವಾಮದೇವಾಸ್ಯದಿಂಜನ್ಮಿಸುತೆ
ಮೀರಿದನಮಃಶಕ್ತಿಶಿವದೈವತಂತಿಳಿಯಲಯ ಕೀಲಕಂ ಮೆರೆಯಲು || ೬೦ ||

ಕಂಗೊಳಿಪುದೀಮಂತ್ರವಟಬೀಜಮಾಪಲ್ಲ-
ವಂಗಳಿಂ ಪಲ್ಲವಿಸಿ ಭುವನಾದಿ ತುಂಗ ತ-
ತ್ವಂಗಳೊಳಗೊಂದೊಂದಕೊಂದೊಂದು ವರ್ಣ ಶಾಖೆಯು ತೀವಿತಚ್ಛಕ್ತಿಯು ||
ಸಂಘಟಿಸುತಾರಾಗಿ ವ್ಯಾಪಿಸುತೆ ಜಗವನ್ನು
ಭಂಗವಿಲ್ಲದೆಮಂತ್ರಲಾಜಪದವಿಯನಿದಕೆ
ಪಿಂಗದಲೆ ತಾನಿತ್ತು ನಾನಾರ್ಥಸಂಪದವನನುಕೂಲ ಮಾಗೆಸೆವುದು || ೬೧ ||

ಈ ತತ್ವಮಂ ತಿಳಿದು ಜಪಿಸುವದು ಮಂತ್ರವಿದ-
ನೋತು ಜಪಿಸುತ್ತ ಸಿದ್ಧಿಯ ಪಡೆದು ಶಿವನಾಗಿ
ಖ್ಯಾತರಾಗಿಹರನೇಕರ್ ಲೋಕದೊಳಗವರೊಳೋರ್ವನಾಖ್ಯಾನವೊರೆವೆ ॥
ಪ್ರೀತಿಯಿಂ ಕೇಳಿರೌ ಪೂರ್ವಕಾಲದೆ ನೃಪನು
ಸಾತಿಶಯ ವೈಭವದೆ ಗುಣಶೇಖರಾಖ್ಯಯೊಳು
ನೀತಿಧರ್ಮವ ಬಿಡದೆ ರಾಜ್ಯ ಶಾಸನವೆಸಗುತಿರ್ದನತಿ ಮೋದದಿಂದ ॥ ೫೮ ॥

ಅವನಿಗಿರ್ದನು ಜೀವನಾಖ್ಯಮಂತ್ರೀಶ್ವರನು
ಸುವಿನಯಾದ್ಯಮಲ ಸದ್ಗುಣಶಾಲಿ ನೀತಿ ಧ-
ರ್ಮವನು ತಿಳಿದಾಚರಿಸುತಿರ್ದನುರು ತತ್ವವನು ವೀರಶೈವವೋತ್ಪನ್ನನು ॥
ಶಿವಲಿಂಗ ಪೂಜೆಯಂ ಸಿರುತಗೈಯುತಲಿರ್ದ-
ನವಿರತಂ ಶಿವಷಡಕ್ಷರ ಮನುವ ಭಾವಿಪನು
ಲವಲಪಿಕೆಯೋಳ್ಗುರು ಚರೋತ್ತಮರ ಸೇವಿಸುತೆ ದುಡಿದನೌ ಸುಕೃತಕಾಗಿ॥ ೫೯॥

ಮಂತ್ರವನೆ ಜಪಿಸುವನು ಮಂತ್ರವನೆ ಧ್ಯಾನಿಪನು
ಮಂತ್ರವನೆ ಭಾವಿಪನು ಮಂತ್ರವನು ತಿಳಿಯುವನು
ಮಂತ್ರಕೊಲಿಯುವನವನು ಜಗವ ಮಂತ್ರಾಕೃತಿಯನಾಗಿ ಬಗೆಯುವನುಮತ್ತೆ ॥
ಮಂತ್ರವೇ ಪ್ರಾಣ ಮಂತ್ರವೇ ವಚನವಾ-
ಮಂತ್ರವೇ ದೇಹವಾ ಮಂತ್ರವೇಚಿತ್ತವಾ-
ಮಂತ್ರವೇ ಬುದ್ಧಿಯಾಮಂತ್ರವೇ ಮನವು ತನ್ಮಂತ್ರವೇಹಮ್ಮಿತಾನು ॥ ೬೦ ॥

ಮಂತ್ರವೇಯಾಗಿರಲ್ಕೆಲ್ಲ ಮಂತ್ರವ ಧರಿಸುತಂ
ಮಂತ್ರಿವರನವನನುಷ್ಠಾನ ಬಲದಿಂದೆ ಸ್ವಾ-
ತಂತ್ರ್ಯ ಸುಜ್ಞಾನದಿಂ ದೂರೇಕ್ಷಣ ಶ್ರವಣ ಸಿದ್ಧಿ ಘಟಿಸಿದಡಮವನು ॥
ತಂತ್ರದೊಳು ಪೇಳ್ದಂತೆ ಮೌನಿಯಾಗಿಹನು ನೃಪ-
ತಂತ್ರಮಂವಹಿಸಿತಾಂ ಭಕ್ತಕಿಂಕರನಿಹನು
ಮಂತ್ರದಿಂ ರಾಜ್ಯವನು ನಡಿಸಿ ರಾಜಾನುರಾಗವನು ಪಡೆದಿಹನು ಸುಗುಣಿ ॥೬೧॥

ಸುಜನ ಹಿತನಾಗಿ ಪರದಾರ ಸೋದರ ನಾಗಿ
ಕುಜನ ಭೀಕರನಾಗಿ ಸರ್ವಜನಸಮನಾಗಿ
ವೃಜಿನರಿಪುವಾಗಿ ಸೌಜನ್ಯ ದಾಗರನಾಗಿ ನೃಪಗೆ ಪ್ರಿಯನಾಗಿ ಶಿವಗೆ ॥
ಭಜಕನಾಗಿರಲವನ ರೂಪಕ್ಕೆ ಮುಗ್ಧಳಹ
ರಜನಿಯೆಂಬುವ ರಾಣಿ ಸಚಿವನಂ ಕಾಣುತಂ-
ಗಜನ ಕೇಳಿಗೆ ಬಲಾತ್ಕರಿಸಿದಳು ರಾಜನಂ ಲಕ್ಷಿಸದೆ ಮಂತ್ರಿಯಾಗಿ ॥ ೬೨ ॥

ಸರಿದು ದೂರದೆನಿಂದು ಪೇಳ್ದನಿಂತವ್ವ ನೀ-
ನರಿಯದವಳಂತಿದೇಂ ನಡಿಸಿರುವೆಯವ್ವ ಕೇ-
ಳರಸನೆಮ್ಮೆಲ್ಲರಿಗೆ ತಂದೆ ನೀನರಿಸಿ ಯಮ್ಮೆಲ್ಲರಿಗೆ ತಾಯಿಯಲ್ತೆ ॥
ಪರಪುರುಷನಂ ಕಾಮಭಾವನೆಯೊಳೀಕ್ಷಿಸಲು-
ಪರಮ ಪಾತಕವಹುದು ಮಾತನಾಡಿದೊಡೆ ಘನ-
ತರಶಿಕ್ಷೆಯಾಗುವದು ಯಮನಲ್ಲಿ ನೀನೆನ್ನ ಮುಟ್ಟಲೈತರುವೆ ತಿಳಿದು ॥ ೬೩ ॥

ನೋಡು ನಿನಗಾವ ನರಕದ ಶಿಕ್ಷೆಯಾಗುವದು
ನಾಡೆ ಸುವಿಚಾರದಿಂ ಕಾರ್ಯವೆಸಗೌ ತಾಯೆ-
ಕೀಡು ನೀಂ- ನಿನ್ನತಾಯ್ತಂದೆಗಳ ಪದ್ಧತಿಯನುಭಯ ವಂಶಕೆ ಕೀರ್ತಿಯು ॥
ಪೌಢವಂಶಜೆ ನೀನು ಮರಿಯಾದೆಗಂಜಿನಡೆ
ಗಾಢನೃಪ ದಂಡನಕ್ಕಾದಡಗಿಯೌ ಮಾತೆ
ಮೂಢಳಲ್ಲೌಂ ನೀನು ಸುಜ್ಞಳಾಗಿರುವೆ ಸುವಿವೇಕದಿಂ ಬಾಳು ಜನನಿ ॥ ೬೪ ॥

ಎಂದು ಬೋಧಿಸಿ ಜೀವನಾಖ್ಯ ಮಂತ್ರಿಯು ಪೊರಗೆ
ಬಂದನಲ್ಲಿಂದವಳು ಬಿಸುಸುಯ್ದು ಸಲೆ ಮನದೆ
ನೊಂದು ತನ್ನಯ ಬಯಕೆ ಬರಡಾದುದಂ ನೆನೆದು ತನಗಿದಪಮಾನವೆನುತಾ ॥
ಅಂದವಳು ತನ್ನಕೃತಿಗಾಗಿ ಪಶ್ಚಾತ್ತಾಪ-
ಮಂದಳೆಯದಲೆ ತಾನು ಗೈದುದೇ ನೀತಿಯುಹು-
ದೆಂದದಕ್ಕೊಪ್ಪದಲೆ ಪೇಳ್ದ ಸಚಿವವಿಚಾರವಾಯ್ತವಳಿಗವಮಾನವು ॥ ೬೫ ॥

ತಿಳಿಯದಲೆ ದುರಭಿಮಾನವೆನಿಸಿಪ್ಪ ಬೇಗೆಯೊಳು
ತಳಮಳಿಸಿ ಕುದಿಯಲಾದಳು ಮನದೊಳಾರಾಣಿ
ಘಳಿಘಳಿಗೆಯೊಳು ನಿರೀಕ್ಷಿಸುತಿರ್ದಳಾ ನಾರಿ ಸಚಿವನಪರಾಧಗಳನು ॥
ಇಳೆಯಾಣ್ಮನೊಡನೆ ತತ್ಸಚಿವವರನೊಂದುದಿನ-
ವಿಳೆಯ ಶಾಸನ ವಿಷಯಮಂ ಮಾತನಾಡುತಿರ-
ಲಲಘುತರ ಸಲ್ಲಕ್ಷಣಂಗಳಿಂ ಶೋಭಿಸುವ ತುರಗವಮಂ ಕೊಂಡೋರ್ವನು ॥ ೬೬ ॥

ಬಂದುನಿಂದಿರೆ ರಾಜ ನೀಕ್ಷಿಸುತೆ ತುರಗವನು
ಚಂದದಿಂದೇರಲುಜ್ಜುಗಿಸಲಾ ಮಂತ್ರಿವರ-
ನಂದು ಮಂತ್ತವನೆನೆದು ಸುಜ್ಞಾನದಿಂ ತಿಳಿದು ಪೇಳ್ದನಿಂತಾ ನೃಪನಿಗೆ ॥
ಇಂದು ನೀನೇರಬೇಡರಸ ಮೊದಲೋರ್ವನಂ-
ಛಂದವೆನಲೇರಿಸಿ ಪರೀಕ್ಷಿಸುತಲೇರೆನಲು
ದಂದುಗದೊಳೊಪ್ಪಲಾರದಲೊಪ್ಪಿದಂ ನೃಪತಿ ದೂತನೇರಿದನಾಗಳೆ ॥ ೬೭ ॥

ಏರಲನಿತರೊಳಗಾತುರಗಮಾಕಾಶಕ್ಕೆ
ಪಾರಿ ಪವನದಗತಿಯುಹೊಂದಿ ನಿಮಿಷಾರ್ಧದೊಳು
ತೋರಿದಂತಾಗಲದು ಜನರಾಗ ಹೌಹಾರಿ ನಿಂದಿರಲು ತದ್ವಾಜಿಯ
ಚಾರಕಂ ಶೋಧಿಸುವ ವ್ಯಾಜದೊಳು ಮರೆಯಾಗೆ
ಸಾರಿದಂ ನೋಡಿಮತ್ತನಿತು ಬೆರಗಾಗುತ್ತೆ
ಪೌರರಖಿಲರ್ ಪೊಗಳಲಾದರತಿ ಮೋದದೊಳು ಮಂತ್ರಿವರ ಚಾತುರ್ಯವ ॥ ೬೮ ॥

ಎರಡು ತಾಸಂಬರಂನೋಡಿ ಕುದುರೆಯು ಸುಳಿಪ
ನೆರೆಕಾಣದಿರೆ ನೃಪನು ತತ್ಕಿಂಕರನಗತಿಯ-
ನುರೆ ನೆನೆದು ಮರಗುತ್ತೆ ತನ್ನನೋವಿದ ಮಂತ್ರಿಚಾತುರ್ಯಮಂ ಪೊಗಳುತಾ ॥
ಇರಲದನು ಕೇಳಿ ತತ್ಸಚಿವೇಂದ್ರನಾತ್ಮನುತಿ-
ಭರವ ಮಾಣಿಸುತಿಂತು ನಿಜವಪೇಳಿದನವರಿ-
ಗರಿದೆನಲ್ ಕೈಮುಗಿಯುತೇನಿದ್ದೆ ನಿಮ್ಮ ಕರುಣೆಯು ಕಂದ ನಾನಿರುವೆನು ॥ ೬೯ ॥

ಎನಲಸಿತರೊಳು ಪತ್ರಮಂ ಕೊಂಡು ದೂತನೋ-
ರ್ವನು ಬಂದು ತತ್‌ಕ್ಷಣದೊಳೀಯಲೀಕ್ಷಿಸಿ ಸಚಿವ-
ನಿಸಿಯಂಗಭಿಪ್ರಾಯಮಂ ಪೇಳ್ದನಿಂತು ಮೃಗಪೀಡೆಯಿಂ ಬಳಿದುಕೊಂಡ ||
ಜನರ ಲೇಖವಿದೆಂದು ನೃಪಗೀಯಲವನೋದಿ
ಕನಿಕರದೊಳಾಗ ಮೃಗಯಾ ವಿಹಾರಕ್ಕರಸ-
ನಿಸಿತನವಕಾಶವೀಯಲೆ ಬೇಂಟೆಯ ಸಿದ್ಧತೆಯ ಗೈಸಿದಂ ಕ್ಷಣದೊಳು || ೭೦ ||

ಮೃಗಯಾ ವಿಹಾರಕ್ಕೆ ಪೋಪ ಪತಿವಾರ್ತೆಯನು
ಮೃಗನಯನೆಯಹರಾಣಿಯರಿದು ದಾಸಿಯನೊಲಿಸು-
ತಗಿಯದಲೆ ಪಾಪಕ್ಕೆ ವಿಷವನುರಪಾಕದೊಳು ಮಿಶ್ರಮಾಗಿಸಿ ದಾಸಿಗೆ ||
ಮಿಗೆ ಪಾರಿತೋಷಕವ ನೊಲಿದಿತ್ತು ಕೃತಿಯನ್ನೆ-
ಸಗೆ ಮತ್ತಮೀವೆನೆಂದೊರಿಯುತದಿಗೆಯ ಕೊಟ್ಟು
ಸೊಗಸಿನಿಂ ಗೌಸ್ಯಮೆಲ್ಲವ ತಿಳುಹಿ ಕಳುಹಿದಳು ನೃಪನಸಂಗಡಮಡವಿಗೆ || ೭೧ ||

ನಾರಿ ಇವಳಲ್ಲ ಸ್ತ್ರೀಗುಣಗಳಿವಳೊಳಗಿಲ್ಲ
ನಾರಿ ಇವಳಹುದು ತದ್ಗುಣವುಂಟುಮಿವಳಲ್ಲಿ
ನಾರಿಯೊಳಗಿರುತಿಹುದು ಸದ್ಗುಣ ಸಮೂಹಮಾಸ್ತ್ರೀಯೆ ಶ್ರೀಯಿಂದಧಿಕಳು ||
ನಾರಿಯೊಳಗಿಹುದು ನಾಡಂ ವನವ ಮಾಳ್ಪಗುಣ
ಮೇರುಜನ್ಮನದ ರಾಣಿಯೊಳು ಪತಿಲಯಚಿಂತೆ
ನೂರಣಕೆ ತೊಡಗಿಹಳು ರಾಜ್ಯದರಿವಿಲ್ಲ ನಿಜ ಮಾಂಗಲ್ಯದರಿವಿಲ್ಲವು || ೭೨ ||

ಇತ್ತಲಾ ಮಂತ್ರಿ ಶಿವನಿಚ್ಛೆಯಿಂ ತನ್ನ ರಾ-
ಜೋತ್ತಮನ ಸಂಕಟವು ದೂರಾಯಿತೆಂದು ಮೆ-
ಚ್ಚುತ್ತೆ ಲಿಂಗಾರ್ಚನೆಯಳೊಲಿದು ಪಾಡುತ್ತೆ ಮನುವಂ ಜಪಿಸಿ ಲಿಂಗದ್ದೊಳಗೆ ||
ಚಿತ್ತವಿಡುತಂ ನೃಪಗೆ ದೀರ್ಘಾಯುವಂ ಬೇಡೆ
ಕುತ್ತುಮೆರಡುಂಟೆಂಬ ಬಗೆಯಾಗಳರಿಯಲ್ಕೆ
ತತ್ತರಿಸಿ ಜೀವನನು ಶಿವಪೂಜೆಯಂ ಮುಗಿಸಿಕೊಂಡು ಪೋದನು ಬೇಂಟೆಂಗೆ ||೭೩||

ವರಸಚಿವ ನೃಪತಿಗಳು ಮೀರಿ ಬೇಂಟೆಯನಾಡಿ
ನೆರೆದಣಿದು ಬಾಯಾರಿ ಹಸಿದು ಗಿಡದಡಿಯಲ್ಲಿ
ಸರಸಿಯುರುತೀರದೊಳು ಕುಳ್ಳಿರುವನಿತರಲ್ಲಿ ಪಾಕಪಾತ್ರೆಯ ನಿರಿಸುತಾ ॥
ಪರಿಚರರು ಪೋಗಿರಲು ಕ್ಷುಧಿತನಾಗಿಹ ನೃಪನು
ತೆರೆದು ಪಾತ್ರೆಯ ಭುಂಜಿಪನಿತರೊಳು ಮಂತ್ರೀಶ-
ನರಸನಂ ತಡೆದದನು ಕಾಗಿಗೀಯಲು ತಿಂದಕಾಗೆಗಳು ಸಾಯುತಿರಲು ॥ ೭೪ ॥

ಅರಸನಾಶ್ಚರ್ಯ ಮೋದಾಬ್ಧಿಯೊಳಗೋಲಾಡು-
ತುರೆ ಪೊಗಳುತಿರೆ ಸಚಿವನಾತನುತಿಯಂಕೇಳ್ದು
ನೆರೆ ನಿಮ್ಮ ಸುಕೃತವೆನ್ನುತೆ ನೃಪತಿಯಂ ಪೊಗಳ್ದು ತಾನು ತಂದಡಿಗೆಯನ್ನು ॥
ಹರುಷದಿಂದೀರ್ವರುಂ ಭುಂಜಿಸುತಲೋರೋರ್ವ-
ರರಿದೆನಲ್ ಕೊಂಡಾಡುತನ್ಯೋನ್ಯ ಗುಣಗಳನು
ಪುರಕೈದಿದರು ಸೈನ್ಯವೆರಸುತ್ತಲರಿದ ಜನರಾನಂದ ಲೋಲರಾಗೆ ॥ ೭೫ ॥

ಅರಮನೆಗೆಬಂದಾಗ ಮಂತ್ರಿಯೊಡನುಂಡು ಪರಿ-
ಪರಿಯ ಹರಟೆಯನಾಡಿ ವೇಳೆಗಳೆಯುತ್ತಿರಲು
ನರಪತಿಗೆ ಮೋದವನು ಸಚಿವನಿಗೆ ಖೇದವನು ಬೀರುತೈದಿತು ರಾತ್ರಿಯು ॥
ಅರಸನಂತಃಪುರಕೆ ಪೊರಡಲಾ ಜೀವನಂ
ಪರಶಿವನ ಸ್ಮರಿಸಿ ನೃಪನಿನ್ನುಳಿದು ಕಂಟಕವ
ಪರಿಹರಿಸಲೆಂದು ಗೌಪ್ಯದೊಳು ಹಿಂಬಾಲಿಸಿದನುರು ನೃಪಾಲನನು ಬಿಡದೆ ॥ ೭೬ ॥

ಬರಲು ಕಂಡಾ ರಜನಿರಾಣಿ ರಾಜನಮೇಲೆ
ಪರಮ ಸದ್ಧರ್ಮಿಣಿಪಾಂಗಿನಿಂ ನಟಿಸುತ್ತ-
ಲರಸ ನಡಿಗಳಿಗೆ ಹಣೆಹಚ್ಚಿ ಬನ್ನಿಯೆನುತ್ತೆ ಕೈವಿಡಿದು ಕುಳ್ಳಿರಿಸುತಾ ॥
ನೆರೆ ಸಮೀಪದೆ ಕೈಯ ಮುಗಿದು ನಿಂದಿರೆಮೆಚ್ಚಿ
ನರಪತಿಯು ನೇಹದಿಂ ಮೇಲೆ ಕುಳ್ಳಿರಿಸಿ ಕೊಂ-
ಡಿರಲು ಭಯಭಕ್ತಿಯಂ ನಟಿಸುತಿರ್ದಳು ಮಹಿಷಿ ದುರ್ಗುಣದ ರಾಶಿಯಾ ॥ ೭೭ ॥

ಇವಳ ಕಾಪಟ್ಯಮಂ ಮರೆಯೊಳಿಹ ಮಂತ್ರಿಕಂ-
ಡವಿನೀತವರ್ತನಕ್ಕುಚಿತಶಾಸನ ವೆಸಗೆ
ಶಿವನ ಪಾರ್ಥಿಸುತಿ ನಿಂದಿರುವನಿತರೊಳ್ ರಾಜರಾಜ್ಞಿಯರಿಗುರೆನಿದ್ರೆಯು ||
ಕವಿಯುತಿರಲೊಂದು ಭೀಷಣ ಭುಜಗವೈದುತಿರೆ
ಜವಡೆ ಸಚಿವನು ಖಡ್ಗಮಂ ತೆಗೆದು ಪೊಡೆಯುತಿರೆ
ತವೆ ಚೂರು ಚೂರಾಗೆ ರಕ್ತಬಿಂದುವು ರಾಣಿಯರು ಕುಚದಮೇಲೊಸರಲು ||೭೮||

ಇದನು ಕಂಡಾಜೀವನಾಖ್ಯ ಸಚಿವಂ ಷಮನಿ-
ಸಿದ ರಕ್ತ ಬಿಂದುಗಳ ವೊರಿಸದಿರ್ದರೆ ಹಾನಿ-
ಯಿದೆಯೆಂದು ಬಗೆದಂದು ಪರನಾರಿಯರ ಮುಟ್ಟುವದು ಧರ್ಮವಲ್ಲೆನ್ನುತ ||
ಹೃದಯಪೂರ್ವಕವಾಗಿ ಮಂತ್ರಮಂ ಧ್ಯಾನಿಸಲು
ವಿದಿತಮಾಯಿತು ಯುಕ್ತಿಯಾಗಜಿವ್ಹೆಗೆ ಬಟ್ಟೆ
ಯದನೊಲ್ದು ಸುತ್ತಿನಾಲಿಗೆಯಿಂದೆ ಕುಚವನೊರಿಸಲ್ಕೆ ಪಿಡಿದಳು ರಾಣಿಯು ||೭೯||

ಅರಿದು ಕೈವಿಡಿದು ಮೆಲ್ಲನೆ ಕೆಳಗೆ ತಾನಿಳಿಯು-
ತರಸಿ ಕೈಬಿಡದಲಿಂತೊರೆದಳಾ ಸಚಿವನಿಗೆ
ಕರುಣೆಯಿಂ ಮಾತನಾಡೈಯೆನ್ನ ನೇಹಕ್ಕೆ ಸರಸದಿಂದೊಪ್ಪಿದೊಡೆ ನೀ- ||
ನರಸನಾಗುವೆಯದನು ಚತುರತೆಯೊಳಾಂಗೈವೆ
ನೆರೆಯಲಿಂದೊಪ್ಪಿದೊಡೆ ಮಪರಾಧಿ ನೀನಪ್ಪೆ
ಪರಕಿಸುತ್ತುತ್ತರವ ಪೇಳು ಸ್ತ್ರೀಯುರಿಗಾರು ಪ್ರತಿಯಾಗಿ ನಡೆಯರೆಂದು || ೮೦ ||

ನೃಪಗೆಚ್ಚರಾಗದಂತೀ ಮಾತಸಾಡುತಿರೆ
ಕುಪಿತ ಮಾನಸನಾಗಿ ಕೈಕೊಸರಿ ಮಂತ್ರಿವರ-
ನಪರ ಶಂಭುವಿನಂದದಿಂ ತೊರೆದನೆಲೆ ತಾಯೆ ನರಕದೊಳೋಲಾಡೆನಾ ||
ತಪಿಸುತಿಹುದೆನ್ನಮನವಾಮೃತಿಯೆ ಸುಖವೆನಗ-
ಮಪರಾಧಿಯಾನುರುವೆಮತ್ಕೃತಿಯು ಮುಗಿಸಿರುವೆ-
ಕೃಪೆಯಮಾಡೌ ಜನನೀ ಪುತ್ರನೆಂದೆನ್ನನರಿಯೆನಲು ಕೋಪಿಸಿರಾಣಿಯು || ೮೧ ||

ಗದ್ದರಿಸಿ ನುಡಿದಳವಳಿಂತು ಮೂಢನೆನೀನು
ಬದ್ಧ ಪಾತಕಿಯಿರುವೆ ನಿನಗೆಲ್ಲಿ ಶಿಕ್ಷೆಯೆನಲಿ-
ಕೆದ್ದನಾಕ್ಷಣದಲ್ಲಿ ರಾಜನೀ ಶಬ್ದವನು ಕೇಳಿ ಗಡಬಡಿಯೊಳಾಗ
ಸದ್ಯದೊಳು ನೋಡಿ ಮಂತ್ರಿಯ ತೋರ್ದುತನ್ನ ಪೇ-
ಲರ್ಧರಾತ್ರಿಯೊಳಿವನು ನೆರೆಬಲತ್ಕರಿಸಲ್ಕೆ-
ದಿರ್ದನೆಂದೊರೆದಳಾ ನೃಪಗೆ ಸತಿದುಃಖಿಸುತೆ ಪುನವರ್ರಿಕೆಯಾಗುವಂತೆ ॥ ೮೩ ॥

ಅರಸನಾ ಸ್ತ್ರೀವಚನಮಂ ನೈಜವೆಂದರೆಯು-
ತುರುಕೋಪದಿಂ ಬೈದು ತನ್ನ ಪ್ರಾಣವ ಪೊರೆದ
ಪರಮೋಪಕಾರಮಂ ಮರೆದು ಚಾಂಡಾಲರಂಕರಿಸಿ ತನ್ನಮಸ್ತಕವನು
ತರಿಯಲಾಜ್ಞೆಯನಿತ್ತನದನರಿದು ಪುರಜನರು
ನೆರೆದಲ್ಲಿ ಮಂತ್ರಿಯಪರಾಧಮಂ ಮರೆದು ಸಲೆ
ಪೊರೆಯಲತಿ ಯಾಚಿಸಿದರಾನೃಪನು ಕೇಳದಿರಲೊಂದುದಿನವಾಶಿಕ್ಷೆಯು ॥ ೮೪ ॥

ಮುಂದುವರಿಸಲು ಕೇಳಲರಸನೊಪ್ಪದಿರಲ್ಕ-
ಮಂದ ಹರುಷದಿ ಶಿವನ ಧ್ಯಾನಿಸುತೆ ಕೊಲೆಗಡಕ-
ರೊಂದಿಗೈದುತಲಿರ್ದನಾ ಸಚಿವನದನು ಕಂಡೆಲ್ಲ ಜನರಳುತಿರ್ದರು
ನಿಂದು ಕೈಮುಗಿದವರಿಗವನು ಕೈಮುಗಿಯುತಂ
ಬಂದು ನಮಿಪರಿಗೆ ನಮಿಸುತ್ತಲವನೈದಿನು
ಕಂದು ಗೊರಲನ ಸದವತಾರಿವೆಂದವನನುತಿಸುತ್ತ ಬೈದರು ನೃಪನನು ॥ ೮೫ ॥

ಆಗ ಮಂತ್ರಿಯರಣ್ಯಕೈದುತ್ತೆ ಕುಳಿತು ಸ-
ದ್ರಾಗದಿಂ ದೂತರಿಗೆ ಕೊಲ್ಲಲ್ಕೆ ಸೂಚಿಸುತೆ
ಯೋಗದಿಂ ಮಂತ್ರಮಂ ತುಟಿಯಲ್ಲಿ ಜಪಿಸುತ್ತೆ ಕುಳ್ಳಿರಲು ಖಡ್ಗದಿಂದ
ವೇಗದಿಂ ಹೊಡಿಯಲ್ಕೆ ಖಡ್ಗವದು ಸುಮಹಾರ-
ವಾಗುತಿರೆ ಸೇವಕರು ನೋಡಿ ಮಹಿಮೆಯನು ಬೆರ-
ಗಾಗಿ ಧಾವಿಸುತೈದಿ ನೃಪಗೆ ಪೇಳುತಿರಲ್ಕೆ ನೃಪತಿ ವಿಸ್ಮಿತನಾದನು

ಅನಿತರೊಳಗಂತಃಪುರದ ದಾಸಿಯರು ಬಂದು
ಘನಸರ್ಪಖಂಡವನು ಮೇಣ್ ರಕ್ತಯುತ ಖಡ್ಗ-
ವನು ತೋರ್ದರರಸನಿಗೆ ನೋಡಿಮತ್ತಿಷ್ಟು ವಿಸ್ಮಿತನಾಗಿ ಸಚಿವನೆಡೆಗೆ ||
ಜನರರಿದು ಬರುತಿರಲು ಬಂದನಾನೃಪವರನು
ಮನದೊಳಧಿಕಾನಂದಮುಣ್ಮುತಿರೆ ಕಂಡಡಿಗೆ
ಜನಪನಾ ಜನತೆಯೊಡನೆರಗುತಿರೆ ತತ್ಸಚಿವ ನೀಕ್ಷಿಸುತೆ ಕೈಮುಗಿದನು ||೮೬||

ಅರಸನದನೀಕ್ಷಿಸುತಲಯ್ಯ ನೀವೇಕೆಮಗೆ
ಕರವ ಮುಗಿಯುವಿರಾವು ತಪ್ಪಿಗರು ನೀವೆಮ್ಮ-
ನರಿದು ಪೊರೆಯುವದಯ್ಯ ಸ್ತ್ರೀವಚನವುಂ ಕೇಳ್ದು ಗೈದಿರುವ ತಪ್ಪನೀಗ ||
ಮರೆದು ಬರ್ಪುದು ತಾವು ದಯೆಗೈಯುತರಮನೆಗೆ
ಪರಿಮಾರ್ಜಿಸುವದೆನ್ನ ಸಂಶಯ ಪಿಶಾಚವನು-
ಪರಿಪರಿಯೊಳಿಂತು ಯಾಚಿಸಲು ರಾಜನಿಗೊರೆದನಾ ಸಚಿವ ಮುಕಟ
ಮಣಿಯು || ೮೭ ||

ನರಪತಿಯೆ ನಿನ್ನ ಸಂಶಯ ನಿವಾರಣಕಾಗಿ
ಮರೆಯದಲೆ ನಿಶ್ಚಿತವ ಪೇಳುವೆವು ಕೇಳಯ್ಯ
ತ್ವರದೆ ನಿನ್ನಂಕಕ್ಕಲು ಬರ್ಪ ಸರ್ಪವನು ಖಡ್ಗದಿಂ ಪೊಯ್ಯಲ್ಕೆ ನಾ |
ನೆರೆ ಛಿನ್ನವಾಗಲು ತದ್ವಿಷವು ತವಸತಿಯ
ವರ ಕುಚದ ಮೇಲಿಳಿಯಲದನೊರಿಸಿದೇಂ ರಸನೆ-
ಗರುಬೆಯುಂ ಸುತ್ತಿ ಬಳಿಕಾ ರಾಣಿಯರಿಯದಲೆ ಗುರಿಗೈದಳಪವಾದಕೆ || ೮೮ ||

ಅನಿತರೊಳಗಾ ರಜನಿ ರಾಣಿಯಂಗಕೆ ಬಿಡದೆ
ಘನಖಡ್ಗದಿಂದಿರಿದ ರೀತಿಯೊಳು ಬಾಧೆಯುರೆ
ಜನಿಸುತಿರೆ ತಾಪದಿಂ ಬಳಲುತ್ತೆ ತನ್ನರಿಹಿಷಿಯೈದಿದಳು ಸುವಿಚಾರದೆ
ಅನಘ ಮಂತ್ರಿಯ ಮಹಿಮೆಯಿದೆನುತ್ತೆ ತಿಳಿದವಳು
ನೆನೆದು ತನ್ನಯ ದುಶ್ಚರಿತ್ರಮುಂ ಸಚಿವವರ-
ನನು ನುತಿಸಲಾನಳಾ ಗೈದಿಪತಿಸನ್ನಿಧಿಯೊಳೆಲ್ಲಮುಂ ತಿಳುಪಿ ಕಥೆಯ || ೮೯ ||

ಕ್ಷಮಿಸಿರೆಂದೆರಗಲ್ಕೆ ನೃಪನು ಕೋಪಿಸುತಿರಲು
ಸಹುತೆಯಂ ಬೋಧಿಸುತೆ ಮಂತ್ರಿಯಾ ರಾಜನಿಗೆ
ರಮಣಿಗುರುಭಸಿತವನು ಧರಿಸೆಂದು ಪೇಳುತ್ತೆ ಸರ್ವರಿಗೆ ನೀತಿಯನ್ನು ||
ಕ್ರಮವಾಗಿ ತಾನೊರೆದು ಸಕಲರಂ ಕಳುಹುತ್ತ-
ಲಮಿತ ಮಂತ್ರವನಲ್ಲಿ ಜಪಿಸಲಾದನು ಸತತ-
ಮಮಳತರ ಭಾವನೆಯೊಳಿರ್ದು ಜೀವನ್ಮುಕ್ತನೆನಿಸಿ ಮುಕ್ತಿಯ ಪಡೆದು || ೯೦ ||

ಇವನಂತೆ ಚರಿಸಿದವರಿವನಂತೆ ಮುಕ್ತರಪ-
ರಿವನ ಚರಿತವನಾವು ತಿಳಿದುವರ್ತಿಪುದೆಂದು
ಶಿವಶರಣೆಯಹ ಮಹಾದೇವಿ ಪೆಣ್ಮಕ್ಕಳಿಗೆ ಮಂತ್ರತತ್ವವ ನೊರೆಯುತ ||
ಸವಿನಯದೆಚರತೀರ್ಥದುರುಮಹಿಮೆಯಂ ಪೇಳ್ದ-
ಳವರ ಹೃದಯಾನಂದ ಮಪ್ಪಂತೆ ನಲಿದಿಂತು
ಶಿವನ ಧ್ಯಾನಿಸುತಾಗ ತನ್ನ ಕರ್ತವ್ಯವೆಂದರಿದು ಶೃತಿಯೊಪ್ಪುವಂತೆ || ೯೧ ||

ವಿಮಲಚರ ತೀರ್ಥಕ್ಕೆ ಮಂತ್ರವೇ ಮೂಲವಹು-
ದಮಲ ಪಾದೋಕವು ಪಾದದಿಂ ಜನಿಸುವದ-
ಸಮಪಾದವಗ್ನಿತತ್ವದ ನೆಲೆಯು ತಿಳಿಯಲಗ್ನೇರಾಪಯೆಂದು ಶೃತಿಯು ||
ಕ್ರಮದೆ ಸಾರುವದವ್ವ ಈಯಗ್ನಿ ಸುಜ್ಞಾನ-
ವಮಿತಾಗ್ನಿಯಾಗಿಹುದು ಈಯಗ್ನಿಗದುಮುಖ್ಯ-
ವೆಮಗಿದುವೆ ಪರಮಾತ್ಮವದು ಜಗದೆ ಮೂಲಾತ್ಮವೆಂದರಿಯಿರವ್ವ ನೀವು || ೯೨ ||

ಇದಕೊಂದು ಚರಿತವಿಹುದಾಲಿಸಿರಿ ಭಕ್ತಿಯೊಳು
ಸದಮಳಿನ ಕಲ್ಯಾಣಪುರದಲ್ಲಿ ಚರನೋರ್ವ-
ನುದಿಸಿಹನು ವೇಮನಾರ್ಯಾಖ್ಯ ಶಿವಯೋಗಿಂದ್ರನನುಪಮನು ಪ್ರಮಥಮೋಹಿ ||
ಹೃದಯ ಪೂರ್ವಕಮಾಗಿ ಲಿಂಗಪೂಜೆಗೆತಾನೆ
ಮೃದು ಕುಸುಮ ಬಿಲ್ವಗಳ ನಾನಂದದಿಂತರುವ-
ನದಕಾಗಿ ಯೊಂದುದಿನವಾಮಹಿಮ ನೊಲವಿಂದೆ ಪೋಗಿ ಬರುವಾ ಸಮಯದೆ || ೯೩ ||

ಸರಸತಿಕುಮಾರನೋರ್ವನು ಲಗ್ನವಾಗುತ್ತೆ
ಬೆರೆದು ನಿಜಸತಿಯೊಡನೆ ಬರುತಿರ್ದನಾಗಳುರು-
ತರವಿಭವದಿಂದಲಾ ವೇಮನಾರ್ಯನು ನೋಡುತಲ್ಪಾಯುವಿವನೆನುತಾ ॥
ಪರಮುದಃಖದೆ ಕರ್ಮರೀತಿಯನು ಯೋಚಿಸುತೆ
ಹರನ ಲೀಲೆಯಿದೆಂದು ನೆನೆಯುತಂ ನಿಂದಿರಲು
ಪರಮಶಿವಯೋಗಿತೇಜವಕಂಡು ನೃಪುತ್ರನೆರಗಲ್ಕೆ ಬಂದನೊಲಿದು ॥ ೯೪ ॥

ಸತಿಯೊಡನೆ ಬಂದಾಗ ನಮಿಸಲಾ ನೃಪಸುತನು
ಯತಿಯವನಿಗಾಶಿಷವ ಗೈಯ್ಯಲಿಲ್ಲೇಂ ಪೇಳ್ವ-
ನತಿಶಯದೆ ನೊಂದು ಮತ್ತೊಮ್ಮೆ ನಮಿಸುತೆ ಕೇಳ್ದನುರುಶುಭಾಶೀರ್ವಾದವ ॥
ಮೃತಿ ನಿನಗೆ ನಾಳೆಗಪ್ಪುದು ಪೋಗೆನಲ್ ಚರನು
ಕ್ಷಿತಿಪಾಲಸೂನುವಾಶಿವಯೋಗಿಯಂ ಬೈದು
ವಿತಿಯಿಲ್ಲದುಮ್ಮಳದೆ ತನ್ನಸದನಕೆ ಬಂದು ಮಲಗಿದನುಸುವಿಲಾಸದೆ ॥ ೯೫ ॥

ಅರಸು ಮಗನಾಪತ್ನಿಯೊಡನೆ ನಿದ್ರಿಸುತಿರಲು
ಭರದೆ ಮೇಲಿಂದೊಂದು ಫಣಿಯು ಬಂದಾನೃಪನ
ಬೆರಳಿಗುರೆಕಚರ್ುತ್ತಲಾರ್ ಭಟಿಸಿ ಪೋಗುತಿರಲವನ ಸತಿಯೆಚ್ಚತ್ತಳು ॥
ನಿರುಕಿಸುತೆ ದುಃಖಿಸಲು ಕೇಳಿ ದುಃಖಧ್ವನಿಯ
ಪರಮಾಪ್ತರೆಲ್ಲರೈದಿದರು ಮಾಂತ್ರಿಕವೈದ್ಯ-
ವರರ ಕರೆಯಿಸುತಾಗಳುಪಚರಿಸತೊಡಗಿದರು ಫಲವೇನು ದೊರೆಯಲಿಲ್ಲ ॥೯೬॥

ಮೃತನಾದ ನೃಪತಿಸುತನನ್ನು ಸಕಲರು ನೋಡಿ
ಮತಿಯಲ್ಲಿ ಮರುಗಿದರು ಸತಿಯು ಸಲೆಕಳವಳಿಸಿ
ಯತಿವರ್ಯ ವೇಮನಾರ್ಯನ ನಾಮಮಂ ಕೊಂಡು ಪಾಡಿಯಳುತಿರ್ದಳಾಗ ॥
ಅತಿದುಃಖಿಪಳ ಬಂಧುಗಳು ಕೇಳಿಸಾವರಿಸಿ
ಕತೆಯೆಲ್ಲಮಂ ಪೂರ್ಣವರಿದು ನಿಶ್ಚಯಿಸಿದರು
ಶಿತಿಕಂಠಯೋಗಿಯಂ ನೆನೆಯುತ್ತಲಾ ಶವವ ಕೊಂಡೊಯ್ದರವನ ಮಠಕೆ ॥೯೭॥

ವಂದಿಸುತೆ ತಚ್ಚರಿತ್ರವ ಪೇಳೆ ತಮ್ಮ ಕೃಪೆ-
ಯಿಂದಿವನು ಬದುಕಬೇಕೆಂದೆನಲು ತದ್ಯೋಗಿ-
ಯಿಂದುಧರನಂ ಧ್ಯಾನಿಸುತ್ತೆ ತತ್ರೀರಣೆಯಿದೆಂದೆನುತೆ ಚರರ ಯಜಿಸಿ
ಬಂಧುಗಳಿಗೊರೆಯುತ್ತೆ ಶವವ ಶುಚಿಗೊಳಿಸುತಾ-
ನಂದದಿಂದಂ ಭಸ್ಮಮಂ ಲೇಪಿಸುತ್ತಾಗ
ಕಂದುಗೊರಲನ ಭಜಿಸಿ ಪ್ರಮಥ ಪಾದೋದಕವ ಪ್ರೋಕ್ಷಿಸಲಿಕೇಳ್ದನಂದು ॥೯೮॥

ಆವರಿಗೆಲ್ಲರಿಗೆ ಶಿವದೀಕ್ಷೆಯಂ ಮಾಡಿ ಪರ-
ಶಿವತತ್ವಮಂ ಬೋಧಿಸುತೆ ಕಳುಹಿಸಿದನಾಗ-
ಳವಿರತಂ ಘನಮಹತ್ವಂಗಳಂ ಗೈಯ್ಯುತೆ ಶಿವನೊಳಗೆ ಬೆರೆದನವನು ॥
ತವೆಯಿನ್ನು ಸುಪ್ರಸಾದದ ಮಹಿಮೆಯಂ ಕೇಳಿ-
ರವಿಕಲಮಹಾಜಂಗಮಾನುಗ್ರಹಂ ತಿಳಿಯ-
ಲವತರಿಪುದೀ ಪ್ರಸಿದ್ಧ ಪ್ರಸಾದಾಖ್ಯೆಯೊಳುತಿಳಿಯಿರಿದ ರಾವಶ್ಯವ ॥ ೯೯ ॥

ಚರಿತಮೊಂದಂ ಪೇಳಿ ದೃಢಗೊಳಿಪೆನಾಂ ನಿಮಗೆ
ಹರನ ಸಭೆಯೊಳಗೋರ್ವ ಖೇಚರಾಹ್ವಯದಿಂದೆ
ಮೆರೆವ ಗಂಧರ್ವನವನಾಜಂಗಮಪ್ರಸಾದವನು ನಿಂದಿಸುತಿರಲ್ಕೆ ॥
ಗಿರಿಶನಾಪ್ರಮಥರೊಳಗೋರ್ವಗಣವರ್ಯನತಿ-
ತರಕೋಪದಿಂದವಗೆ ಹಂದಿಯಾಗುದಿಸೆಂದು
ಭರದೆ ಶಾಪವ ನೀಯಲವನು ವಂದಿಸಿ ಯಾಚಿಸಲ್ ಗಣವರಂ ನುಡಿದನು ॥೧೦೦॥

ಜನಿಸುಮರ್ತ್ಯದೆ ಸುಪ್ರಸಾದಮಹಿಮೆಯೊಳ್ಮೆದೆ
ನಿನಗೆ ನಿಜಪದವಹುದು ಪೋಗೆನಲು ನಮಿಸಿ ಬಂ-
ದನು ಶಿವನ ಧ್ಯಾನಿಸುತಲಿಳೆಗೆ ಕಾಶ್ಮೀರದೇಶದೊಳು ತದ್ರಾಜಧಾನಿ ॥
ಘನನಗರ ಮಾಂಡವ್ಯಪುರದಲ್ಲಿ ಜನ್ಮಿಸಿದ-
ನನುಪಮನು ಹಂದಿಯಾಗಿರುತೆ ಬೆಳೆಯುತ್ತಿರಲಿ-
ಕನಘರನೆಚರೋರ್ವನಾ ಊರ ಕೆರೆಯಲ್ಲಿ ಭುಂಜಿಸುತೆ ಪೋಗಿರ್ದನವನು ॥೧೦೧॥

ಆಗಳಾಹಂದಿ ಬಂದಲ್ಲಿ ಮೇಯುತ್ತಿರಲು
ಭೋಗವದು ಫಲಿಸಲ್ಕೆ ಸೂಸಿದಾ ಚರಶೇಷ-
ವಾಗ ದೊರೆಯುತಿರಲ್ಕೆ ಮೆಲಲು ತತ್‌ಕ್ಷಣದಲ್ಲಿ ರುಜೆಯಡಿಸಿತಾಪಂದಿಗೆ ||
ರೋಗವದು ದಿನದಿನಕೆ ಬೆಳೆಯಲ್ಕೆ ವೈದ್ಯವರ-
ಪೂಗದಿಂ ತಿಳಿದದರ ಯಜಮಾನನುರೆ ಕುಡವ
ರಾಗದಿಂ ಕಾಶಿ ಬರೆಯಂ ಕೊಡಲು ಕುಡವು ನವದಿವ್ಯ ಸೌವರ್ಣಮಾಗೆ ||೧೦೨||

ತಿಳಿಯುತೀವಾರ್ತೆಯನು ಮಾದೇವ ಭೂಪಾಲ
ನಿಳೆಯಲ್ಲಿ ಪೊಸತಿದೆಂದೀಕ್ಷಿಸಲು ಪಂದಿಯನು
ಘಳಿಗೆಯೊಳು ತರಿಸಿ ಬರೆಯಂಕೊಡಲು ಕುಡವಾಗ ಸ್ವರ್ನಮಯವಾಗಿ ಕಿಟಿಯು ||
ಅಳಿದು ಗಂಧರ್ವಜನ್ಮಕೆ ಬರಲು ತತ್ತನುವ-
ನಿಳೆಯಾಣ್ಮನೀಕ್ಷಿಸುತೆ ವಿಸ್ಮಿತಂ ತಾನಾಗಿ
ಘಳಿಲನಾ ಗಂಧರ್ವವದನದಿಂ ಶ್ರದ್ಧಾಳುವೆಲ್ಲ ಚರಿತವನರಿದನು ||೧೦೩||

ಗತಿಸಲ್ಕೆ ಖೇಚರನು ಗಂಧರ್ವಲೋಕಕ್ಕೆ
ಕ್ಷಿತಿಪತಿಯು ಮನದಲ್ಲಿ ಚರಶೇಷದುನ್ನತಿಯ-
ನತಿಶಯದೆ ಬಣ್ಣಿಸುತೆ ತಾನು ನಿತ್ಯಂ ಪೊಂದಲೆಳಸಿ ಕರೆಸಿದನು ಚರಠ-
ತತಿಯನೊಲವಿಂ ನಿಜಮಹಾಶ್ರಯದೊಳಿರಿಸಿಕೊಂ-
ಡತಿ ಭಕ್ತಿಯೊಳು ತತ್ಪ್ರಸಾದಮಂ ಕೊಳುತಿಹನು
ಸಿತಿಕಂಠನುರೆ ಮೆಚ್ಚಿ ತನ್ಮಹಿಮೆಯಂ ಮೆರೆಸಿಯಮಳತೆಯ ನಿತ್ತನಾಗ ||೧೦೪||

ಇದು ಜಂಗಮಪ್ರಸಾದದ ಮಹಿಮೆಯಿದರಿಂದ-
ಲುದಿಸುವದುಮಾಂಸ ಪಿಂಡತೆಯಳಿದು ಮಂತ್ರಾಂಗ-
ಮಿದುಮನ್ನಮಯವಲ್ಲ ಕರ್ಮದಿಂ ಜನಿಸದಿದು ಮಂತ್ರ ಸಂಸ್ಕಾರದಿಂದೆ ||
ವದಗುತಿಹುದನ್ನದಿಂದಂ ಮಾಂಸವರ್ಧನಮು-
ಹುದು ಸುಪ್ರಸಾದದಿಂ ಮಂತ್ರಮಯ ವರ್ಧನಮಿ-
ಹುದು ತದನ್ನದೆ ಜನ್ಮಮೃತಿ ಭಯಂ ದೇಹಕ್ಕೆ ಸುಪ್ರಸಾದದೊಳಿಲ್ಲವು ||೧೦೫||

ಆಚಾರ ಘನತೆಯಿಂದೀ ಪ್ರಸಾದವು ದೊರೆವು-
ದಾಚಾರವೇ ನೀತಿಯೆಮ್ಮಮತ ಭಕ್ತರಿಗೆ
ಸ್ವಾಚಾರವೇ ಲಿಂಗವಾಗಿಹುದು ಶರಣರಿಗದಾಚಾರವೇ ಪ್ರಾಣವು ||
ಆಚಾರದೊಳು ಮತ್ತಹಿಂಸಾದಿ ಗುಣವಿರೆ ಸ-
ದಾಚಾರವೆನಿಸುವದು ಭಕ್ತಕಿಂಕರಗೆ ಭೃ-
ತ್ಯಾಚಾರ ವೊದಗುವದು ಲಿಂಗಮಂ ಬಿಡದರ್ಚಿಸುವದೆ ಲಿಂಗಾಚಾರವು ||೧೦೬||

ಶಿವಮಯಂ ಜಗವೆಲ್ಲವೆಂದರಿವುದೇ ಪರಮ-
ಶಿವಮಹಾಚಾರವಿದು ತಚ್ಛೀಲದೊಳಗಿರುತೆ
ಭವಿಯನೀಕ್ಷಿಸೆನೆಂಬುದಾ ಗಣಾಚಾರವಿದನೆಲ್ಲವರಿದಾಚರಿಪರೆ ||
ಶಿವಭಕ್ತರೆನಿಸುವರು ತತ್ವಶಾಸ್ತ್ರಕೆ ನಿರುತ-
ಮವರೆ ಪರಮಾಧಿಕಾರಿಗಳೆಂದು ತಿಳಿಯಿರಿವ-
ರವಿರತಂ ಮಾಹೇಶಪದವ ಪಡೆಯುವರು ನಿಷ್ಠಾಬಲದೆ ಶುದ್ಧರಾಗಿ ||೧೦೭||

ಮತ್ತಮವರೇ ಸುಪ್ರಾಸಾದಿ ಪದಮಂ ಪಡೆವ-
ರತ್ಯಧಿಕ ಸಾವಧಾನದ ವಿವೇಕದೆ ನಿರುತ-
ಮುತ್ತಮಚರಪ್ರಸಾದಮಿದೆಂದು ಜಗವನರಿದಾ ಲಿಂಗಕಿತ್ತೆಲ್ಲವ ||
ನಿತ್ಯದೊಳು ಲಿಂಗಭೋಗೋಪ ಭೋಗಿಗಳಾಗಿ
ಚಿತ್ತದೊಳು ಲಿಂಗಮಂ ಜಾನಿಸುತೆ ಲಿಂಗಮಂ
ಯುಕ್ತಮಾಗಿಹ ಪ್ರಾಣಮಾಗಿರಲು ಪ್ರಾಣವೇ ಲಿಂಗಮಾಗಿರಲು ತಿಳಿದು ||೧೦೮||

ಪ್ರಾಣಲಿಂಗಿಸ್ಥಲವ ನೈದುವರು ತ್ರಿಮಲಗಳ
ಮಾಣಿಸುವ ಸದ್ಗುರುವಿನುಪದೇಶದೊಳಗಿರ್ದು
ಕಾಣುವತು ಶರಣಪದವಿಯನ್ನೈದೆ ಪಂಚೇಂದ್ರಿಯ ಪ್ರಕೃತಿ ಸಂಗಸುಖವ ||
ಮಾಣುತಂ ಲಿಂಗವೇ ಪತಿ ತಾನೆ ಸತಿಯೆಂಬು-
ದೂಣೆಯಿಲ್ಲದೆ ಬಲಿದು ಪರಿಣಮಿಸುತರಿದು ನಿರ್-
ವಾಣ ಸುಖಸೀಮೆಯೆಯಹಲಿಂಗಕವಸಾನ ಭೂಮಿಯಯು ತಾನೆ ತನಗೆ ಪರಮ ||೧೦೯||

ಲಿಂಗಮವಸಾನ ಭೂಮಿಯುಮೆಂದು ಭಾವಿಸುತೆ -
ಸಿಂಗಿಸಿ ಬಹಿಃಪ್ರಪಂಚ ಕ್ರಿಯೆಯನೆಲ್ಲವನು
ಭಂಗವಿರಹಿತ ಚಿದನುಭವದೆ ನೀ ನಾನೆಂಬ ಶಬ್ದಭೇದವನಡಗಿಸಿ ॥
ಕಂಗೊಳಿಪರೀಯೈಕ್ಯದೆಡೆಯನೈದುತೆ ಭಕ್ತ-
ರಿಂಗಿತವಿದಾರು ವಿಧವಾಯ್ತು ತಿಳಿಯಿರಿ ನೀವು
ಮಂಗಲ ತ್ಯಾಗಾಂಗ, ಭೋಗಾಂಗ ಯೋಗಾಂಗವೆಂಬುದಂ ತಿಳಿಯಿರಿದುವೆ ॥೧೧೦॥

ಅಂಗಸ್ಥಲಂ ಶೋಭಿಸುವದಿಂತುಮಿದಕಾದಿ-
ಲಿಂಗಸ್ಥಲಂ ಕೇಳಿರದರ ಭೇದವನೊರೆವೆ
ತುಂಗಮೆನಿಪಾಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗವು ॥
ಸಂಗತಂ ಪ್ರಾಸಾದಲಿಂಗಂ ಮಹಾಲಿಂಗ-
ಮಂಗಸ್ಥಲಕ್ರಮವ ಪಿಡಿದು ಜನಿಸುವವಾರು
ಲಿಂಗಗಳು ಮೆರೆವಿಷ್ಟಲಿಂಗದೋಳ್ ಪ್ರಾಣಲಿಂಗದೆ ಭಾವಲಿಂಗದೊಳಗೆ ॥೧೧೧॥

ಇದುವೆ ಲಿಂಗಸ್ಥಲವು ತಿಳಿಯಿರೌ ಬ್ರಹ್ಮಕ್ಕೆ
ಯೊದವಿಹುದು ಸ್ಥಲನಾಮವಾಶಕ್ತಿ ಚಲನದೊಳ-
ಗುದಿಸಿತ್ತು ಲಿಂಗಸ್ಥಲಂ ತಾನೆ ಬ್ರಹ್ಮಾಂಡರೂಪಾಯ್ತು ಶಕ್ತಿಯಾಗ ॥
ಸದಮಳಿನ ಭಕ್ತಿಯಾಹ್ವಯವೆತ್ತುರಚಿಸಿಹುದು
ಮೊದಲಿಗೊರಿದಂಗಸ್ಥಲವನದರೊಳಾಗಿಹುದು
ವಿದಿತ ಪಿಂಡಾಂಡವದರಿಂದೆ ಭಕ್ತಿಯದಧಿಕವಾ ಭಕ್ತಿಯೆನೆ ಸಾಧಿಸಿ ॥೧೧೨॥

ಭಕ್ತರಪ್ಪವದು ನಾವು ಶಿವನಿಂದಲಧಿಕರಾ-
ಭಕ್ತರೆಂರಿದರಿದು ಬಾಳುವದೆನುತಲಕ್ಕನಾ.
ಭಕ್ತೆಯರಿಗಾಗ ಪೇಳುತ್ತಿರಲು ಕೈಮುಗಿಯುತೆಲ್ಲರುಂ ನಮಿಸಿ ನುತಿಸಿ ॥
ಭಕ್ತಿಯಂ ಕರುಣಿಪುದು ನೀವೆಂದು ಬೇಡುತ್ತೆ
ಮುಕ್ತಾಂಗನೆಯರೇಳ್ದು ಪೋಗಲಾ ಮಾದೇವಿ
ಇತ್ತ ಶಿವಪೂಜೆಯೆಸಗುತ್ತಿರಲು ಕೌಶಿಕಂ ವ್ಯಸನಾಬ್ಧಿಯೊಳು ಮುಳುಗಿರೆ ॥೧೧೩॥

ದಾಶಿಯರು ಬಂದು ವಂದಿಸಿ ಪೇಳಿದರು ನೃಪನೆ
ಲೇಸಾಗಿ ತನ್ಮಹಾದೇವಿಯೊರೆದುಕ್ತಿಯನು
ಕಾಶಿಕಾಹ್ವಯ ನೃಪತಿ ಕೇಳ್ದು ತದ್ವಚನಮಂ ಮನದೆ ಯೋಚಿಸಿದನಿಂತು
ಹೇಸಿಕೆಯ ಮಾತಿದಿಳೆಯಾಣ್ಮನಾದೆನಗೆ ಸ್ತ್ರೀ-
ಯಾಶೆಗಾಗಿಯೆ ಸ್ವಧರ್ಮವ ತೊರೆದು ಶಿವಮತವ-
ನಾಶಿಸುತೆ ಸ್ವೀಕರಿಪುದೆಗ್ಗತನವಹುದಾನೆ ಶೆಳೆತರುವೆನವಳಪಿಡಿದು ॥ ೧೧೪ ॥

ಅಂತು ಸಂಧಿ ೫ ಕ್ಕಂ ಪದಗಳು ೩೧೫ ಕ್ಕಂ ಮಂಗಳಂ

|| ಶ್ರೀಗುರು ಸಿದ್ಧಲಿಂಗಾಯ ನಮಃ ||

# ಶ್ರೀಅಕ್ಕಮಹಾದೇವೀ ಪುರಾಣಂ

## ೬ ನೇ ಸಂಧಿ

ಸೂಚನೆ— ಅರಸು ಕೌಶಿಕನಿರದೆ ಮಾದೇವಿಯಾಲಯಕೆ
ಭರದಿಂದಲೈತಂದು ಲಗ್ನವಾಗಲು ಬಯಸಿ
ಹರದೀಕ್ಷೆಗೊಪ್ಪಿ ತತ್ಕಪಟೆಯು ಬಲಾತ್ಕರಿಸೆ ತ್ಯಜಿಸಿ
ವಸನವನಡೆದಳು ||

ಸ್ತೋತ್ರ— ಇಷ್ಟವೇ ಗುರವು ಸ್ವಪ್ರಾಣವೇ ಲಿಂಗಮಾ-
ಶ್ರೇಷ್ಠ ಸದ್ಭಾವವೇ ಜಂಗಮುವಡೆಂದರಿದು
ಶಿಷ್ಟ ಬಸವೇಶ್ವರನು ಶಿವಪೂಜೆಯಂ ಮಾಡುತಿರ್ದನನುಸಂಧಾನದೆ||
ಇಷ್ಟಲಿಂಗಕಲಾತ್ಮನಾದ ಪ್ರಭುವಲ್ಲಮಂ
ನಿಷ್ಠೆಯಿಂ ತಾನರಿದು ಬಸವರಾಜಂಗೆ ನಲಿ-
ದಷ್ಟಮೂರ್ತಿಯ ನಿರಂಜನ ರೂಪನೈದಿ ಪೂರೆದಂತೆ ತಾಂ ಪೊರೆಯಲೆನ್ನ || ೧ ||

ಘನಮಹಾದೇವಿ ಶಿವಪೂಜೆಯಂ ಮಾಡುತ್ತೆ
ಚಿನುಮಯದ ಹಸ್ತದೊಳಗೆಸೆವಾತ್ಮಲಿಂಗವನು
ತನಗೆ ಸಲ್ಲುವ ತೆರದಿ ಪೂಜಿಸುತಲಿರ್ದಳದನೇನು ಬಣ್ಣಿಸುವೆ ನಾನು ॥
ನೆನಹಿಂದಲೊಳಗಣುಪಚಾರಗಳ ಕಲ್ಪಿಸುತೆ
ಮಿನುಗುವುಪಕರಣಗಳ ಕರದಿಂದೆ ಗ್ರಹಿಸುತ್ತ
ಲನುನಯದೆ ಹೊರಗೊಳಗು ಮೊಂದಾಗಿ ನೋಳ್ಪರಿಗೆ ಶಿವನಂತೆ ಕಂಗೊಳಿಪಳು ॥೨॥

ತನುಕರಗದವರಲ್ಲಿ ಮಜ್ಜನವ ನೊಲ್ಲೆಯೈ
ಮನಕರಗದವರಲ್ಲಿ ಪುಷ್ಪಗಳನೊಲ್ಲೆಯೈ
ನೆನೆದು ಪದುಳಿಗರಾಗದವರಲ್ಲಿ ಗಂಧಮಂ ನೀನೊಲ್ಲೆಯಯ್ಯ ದೇವಾ ॥
ಇನಿತು ಭೇದವದಿಲ್ಲದವರೊಳಕ್ಷತೆಯೊಲ್ಲೆ
ಘನಭಾವಶುದ್ಧವಿರದವರ ಧೂಪವನೊಲ್ಲೆ
ತಣಿದರಿವು ಗಣ್ದೆರೆಯದವರಲ್ಲಿ ಕರ್ಪುರವನೊಲ್ಲೆ ನೀನು ಶಿವನೆ ॥೩॥

ಪರಿಣಾಮಿಯಾಗದಿರಲೊಲ್ಲೆ ನೈವೇದ್ಯವನು
ಪರಗುಣಿಗಳಾಗದಿರೆದಿರಲೊಲ್ಲೆ ತಾಂಬೂಲವನು
ನೆರೆ ಹೃದಯಶುದ್ಧವಿರದವರಲ್ಲಿ ಇರಲೊಲ್ಲೆಯೆನ್ನೊಳೇನುಂಟೆಂದು ನೀ-
ಮೆರೆವೆನ್ನ ಕರತಲವನಿಂಬುಗೊಂಡೈ ಪೇಳು
ಪರಚೆನ್ನ ಮಲ್ಲಿನಾಥನೆ ಯೆನುತೆ ವಚನವನು
ಸರಸಮೆನೆ ರಚಿಸುತ್ತೆ ಪಾಡಿಪರತರಲಿಂಗನುಂ ನೋಡಿಮುದವಡೆದಳು ॥೪॥

ಇಂತು ಶಿವಪೂಜೆಯಂ ಮಾಡುತ್ತೆ ನಲಿಯುತ್ತೆ
ಶಾಂತೆ ಪೊರಗೈದು ತಿರಲನಿತರೊಳು ಕೌಶಿಕನು
ಸ್ವಾಂತರಂಗವು ಚಲಿಸುತಿರೆ ತಾನೆಯ್ದಿದನು ನೋಡಿದನು ಮಾದೇವಿಯ ॥
ಅಂತು ಬರಲಾಗ ನಿರ್ಮಲನೇಳ್ದು ಗೌರವಿಸಿ
ಸ್ವಾಂತದೊಳು ಭೀತಿಯೊಡೆಯುತ್ತೆ ಮೌನದೊಳಿರಲು
ಕಾಂತ ನರಪತಿಯಿಂತು ಮಾತನಾಡಿದನಾಗಳವಗೇನುಂಟು ಭಯವು ॥೫॥

ಭೀತಿಯಿಂ ಬಿಟ್ಟು ನೀಂ ಪೇಳು ನಿರ್ಮಲದೇವ
ಖ್ಯಾತಿ ನಿನಗಹುದೆನ್ನ ಬಾಂಧವ್ಯದಿಂ ತಿಳಿದು
ಪ್ರೀತಿಯಿಂ ಕೊಡಲೊಪ್ಪು ತವಸುತೆಯಪರಿಣಮಿಸಿ, ಯೋಜಚನೆಯಮಾಡಬೇಡ ||
ಓತು ಧರ್ಮಕೆ ಮನವನಿತ್ತು ತವ ನಾಶವನು
ಖ್ಯಾತಮೆನೆ ಮಾಡಿಕೊಳ್ಳುವೆ ನೋಡು ನಾನೆಂದು
ಸೋತು ಬಿಡುವವನಲ್ಲ ನಿನ್ನಮಗಳಾದರಿದನರಿತುಕೊಳ್ಳಲಿ ಬಗೆಯೊಳು || ೬ ||

ಆಗನಿರ್ಮಲನು ನೃಪನಂ ನೋಡುತಿಂತೊರೆದು
ಸ್ವಾಗಮಜ್ಞರು ಮೆಚ್ಚುವಂತೆ ಸುವಿಚಾರವನು
ರಾಗದಿಂ ಕೇಳರಸ ಲಗ್ನವೆಂದಡದರಿಯಲಾಗ್ರಹದ ಮಾತಲ್ಲವು ||
ಭೋಗಮದು ಪ್ರೇಮದಿಂದಪ್ಪುದಲ್ಲದೆಬಿಡಾ
ವೇಗದಿಂದಪ್ಪುದಲ್ಲವು ಫಲವನೀನಿವಳ
ನೀಗಳೊಪ್ಪಿಸು ನನಗೆ ಚಿಂತೆಯೇನಿಲ್ಲವೈಯಿವಳು ಸುಖವಿರಲುಸಾಕು || ೭ ||

ತವಧನವು ಬೇಡೆನಗೆ ಮನ್ನಣೆಯು ಬೇಡೆನಗೆ
ತವ ಸುಬಾಂಧವ್ಯವೆನಗೆಂದೆಂದು ಬೇಡವೈ
ಶಿವಭಕ್ತ ಸಂಬಂಧವೆನಗಿರಲಿ ಜನ್ಮ ಜನ್ಮಾಂತರದೊಳರಿದು ನೋಡು ||
ತವನಿನ್ನ ಪುತ್ರಿಯನು ಪರಮತದ ಪುರುಷಂಗೆ
ಸುವಿಧಾನ ಸುಪ್ರೇಮದಿಂದೊಪ್ಪಿಸುವಿಯೇನು
ಸುವಿಮಲಾಂತಃಕರಣದಿಂ ವಿಚಾರಿಸಿ ನೋಡು ನಮ್ಮ ನಿಮ್ಮಯ ಧರ್ಮವ || ೮ ||

ನಿನಗೆ ಪ್ರೇಮದ ಕುರುಹು ಬೇಕೆನುವದಾದಡರಿ
ವಿನುತ ಶಿವದೀಕ್ಷೆಯನು ಹೊಂದಿಕನ್ಯೆಯಕೇಳು
ಘನಭಕ್ತರೊಪ್ಪುವರು ನಿನ್ನ ಸಂಬಂಧಕೆ ನಲಿದೀವೆ ಪ್ರೇಮದಿಂದ ||
ಮನ ಒಪ್ಪದೊಡೆ ಮತಿಗೆ ತಿಳಿದಂತೆ ಮಾಡು ನೀ–
ಜನಪತಿಯು ನಿನಗಾರುಃ ಪೇಳುವರು ಕನ್ಯೆಯ–
ನ್ನಿನಿತಾದೊಡುಂ ನೀಮೆಚ್ಚಿಸಲೆಬೇಕಿಲ್ಲದಿರ್ದೊಡದಕೊಪ್ಪರಾರು || ೯ ||

ಅದು ಬಲಾತ್ಕಾರವೆನಿಸುವದು ರಾಕ್ಷಸ ಕೃತಿಯು-
ಮದುರಾಜನೀತಿಯಲ್ಲಂ ತಿಳಿಯೆ ಸಜ್ಜನತೆ-
ಯದಕೊಪ್ಪದೈ ನೀನು ಮನಬಂದತೆರದಿ ನಡೆದರೆ ವಿನಾಶಂತಪ್ಪದು ॥
ಸದಮಳಿನ ಭೂಪಾಲನಪಕೀರ್ತಿಗಂಜುವನು
ಮದನ ವಿಕೃತಿ ಯೊಳಾಯ್ತುಹರಿಗಗೌರವವು ತಿಳಿ
ಪದುಳದಿಂ ನೆರೆ ವಿಚಾರಿಸಿ ನಡೆವುದತ್ಯಧಿಕವರಿದು ನೋಡೈನೃಪವರ ॥ ೧೦ ॥

ನೃಪನೊರೆದನೆನಗಮಿನಿತೇಕೆ ವೇದಾಂತ ವೈ
ಕಪಟಮನನಲ್ಲವಾಂ ಪಿಡಿ ಪಾಣಿನಮಂ ಕೊಡುವೆ-
ನಪಲಾಪವಾಡಿ ವೇಳೆಯ ಕಳೆವುದೇಕೆ ಶಿವದೀಕ್ಷೆ ಯಾಗಲಿಕೊಪ್ಪುವೆ ॥
ವಿಪರೀತರಾದೆವ್ಮು ಬಂಧುಗಳಿಗಿವಳಗುಣ
ಸುಪಥಧರ್ಮಸುನೀತಿರೂಪಾದಿಗಳು ತಿಳಿಯ-
ಲಪರಿಮಿತಸುವಿಚಾರದಿಂ ನಿಮಗೆ ಪೇಳುವೆನು ಕಳುಹಿಕೊಡಿರೆಮ್ಮಕೂಡ ॥೧೧॥

ನೀವು ಸಹ ಬರಹುದು ತೊಂದರೆಯದಿಲ್ಲವೆನು-
ತೀವಿಧದೆ ವಿಶ್ವಸಿತ ವಚನದಿಂ ನಂಬುಗೆಯ
ನೋವಿಪುಟ್ಟಿಸಿ ಕೈಯ್ಯಮೇಲೆ ಕೈಹಾಕಿ ಸಲೆಮಾತನೀಯಲು ನಂಬುತ ॥
ಸಾವಧಾನಕ್ಕಿನಿತಮವಕಾಶಮಂ ಕೊಡದ-
ಲಾವಸುಮತೀಶನೊಳು ನಂಬುಗೆಯನಿತ್ತುನೆರೆ
ಕಾವನೀಶ್ವರನೆಂಬ ಸದ್ಭಾವಮದು ಜನಿಸೆ ನಿಜಸತಿಯ ನೋಡಿ ॥ ೧೨ ॥

ಸುಮತಿಯುಂ ಮಾತನಾಡಿದಳಿಂತು ನೃಪಗಾಗ-
ಳಮಲ ಮನದಿಂ ನೋಡಿ ಕೇಳಿರೈ ನೃಪವರರೆ
ವಿಮಲ ಸುತೆಯೊಡನೆ ನಾವ್ ಬರ್ಪೆವೈನಿಮ್ಮಯ ವಿವಾಹ ವಾಗುವವರಿಗದೆ ॥
ಕಮನೀಯ ಸದನದೊಳಗಿರ್ಪೆವೈಮಗಳನಾವ್
ನಿಮಿಷ ಮಾದಡುಮೆಂದುಮಗಲಿಲ್ಲ ತಿಳಿಯಿರೈ
ಕ್ರಮವಿಡಿದು ಬಂದಿಹುದು ಕನ್ನಿಕೆಯನೋರ್ವಳನೆ ಕಳಿಪುದೆಂತು ॥ ೧೩ ॥

ಆಗಲೌ ನಿಮ್ಮಿಚ್ಛೆಯಿದ್ದಂತೆ ನಡೆದಪೆನು
ರಾಗದಿಂ ಕೊಳ್ಳಿರೀಯಾಭರಣಗಳ ಧರಿಸಿ-
ರೀಗ ನಿಮ್ಮಯ ಮಗಳಿಗೆಂದೊರೆದು ರಾಜನಾದಾಸಿಯರ ಕರೆದು ಕೊಡಿಸೆ ||
ಆಗಳೆ ಮಹಾದೇವಿಗಿಡಿಸಿದಳುಮಾತೆಯಾ-
ದಾಗಿನಗಳಂ ನವದುಕೂಲಮಂ ಧರಿಸುತ್ತೆ
ಲೋಗರಚ್ಚರಿಯೊಡೆವ ತೆರದಿ ಕಣ್ಗೊಪ್ಪಿದಳು ಸಿಂಗರದ ಸುಗ್ಗಿಯಂತೆ || ೧೪ ||

ಶೋಕವೆ ಮಹಾದೇವಿಗಾವರಿಸಲಾಯಿತ್ತು
ಶೋಕಕ್ಕು ಸೌಖ್ಯಕ್ಕು ಕಾರಣ ವಶೋಧಿಸುತ
ಲಾಕೆಯೀ ಮನವೆಂದು ತಿಳಿದದನು ಶಿವಗರ್ಪಿಸುವಳು ವಚನವ ಪಾಡುತ ||
ಲೋಕದಾಚೇಷ್ಟೆಗಂ ರವಿಬೀಜಮಾದವ್ರೋ-
ಲೀಕರಣಚೇಷ್ಟೆಗಾ ಮನವೆ ಬೀಜವು ತಿಳಿಯ-
ಶೀಕಮನವೆನಗಿರ್ಪುದದು ನಿಮ್ಮೊಳೊಡವೆರೆಯೆ ಭಯವಿಲ್ಲ ಚೆನ್ನಮಲ್ಲ || ೧೫ ||

ಎಂದುಕೊಂಡಾಡುತ್ತೆ ಭಕ್ತಿಯೊಳು ಬೆರೆದಿರಲು
ಬಂದು ತಪ್ತಿತನಾಗ ಮಗಳೋಜಮಂ ಕಂಡ-
ಮಂದಮುದವಾಗುತಿರೆ ಸುತೆಯಗಲ್ಕೆಯ ಶೋಕವಾವರಿಸಿತಪಸಾಗಲೆ ||
ತಂದೆಯಪ್ಪಲ್ಕವಳಕಂತಮುಂ ಬಿಗಿಯೆ ಬಳಿ-
ಸಂದ ಮಾತೆಯ ಕಣ್ಗಳಶ್ರುಪೂರ್ಣಗಳಾಗೆ

ಬಂಧುರದವಾತ್ಸಲ್ಯಮಾದುಹಿತೃಕಲ್ಯಾಣಮಂ ಬಗೆದು ವ್ಯಥೆಯಳಿಸಿತು || ೧೬ ||
ನರಪನಾತುರಕಗಿದು ಶೋಕಮೋಹಂಗಳು-
ವರಿಸದಲೆ ಮೆಲ್ಲಮೆಲ್ಲನೆ ಸರಿದು ಪೋದವೆನೆ
ಸರಿಪಡಿಸಿ ಕೊಳುತೆ ನಿಲ್ಲುತ್ತೆ ಹೊರಗೈದಿದರು ಕರೆದುಕೊಂಡಾಮಗಳನು ||
ಅರಸನು ಮಹಾದೇವಿಯಾಸ್ಯಮಂ ಕಾಣುತಲೆ
ಮರೆಯಿತವಕ್ಷಿಯೆವೆಯೆಕ್ಕುವದ ನಾಶಿಕವು
ತೊರೆಯಿತುಸುರಾಡಿಪುದನರಿದೆನಲ್ ಘಟಿಸಿಹುದು ನೃಪಗೆಪ್ರತಿ
ಮೆಯಸಂಜ್ಞೆಯು || ೧೭ ||

ಜನರಕ್ಷಣದಲ್ಲಿ ನೆರೆಯತೊಡಗಿದರಲ್ಲಿ–
ಯನಿತರೊಳು ಸಿದ್ಧಮಾಯಿತು ಮೇಣೆ ಸಿಂಗರಿಸಿ
ಯನಿಮಿಷದೊಳೀಕ್ಷಿಸುತೆ ಕೆಲರ ಪೊಗಳಿದರವಳ ಸೌಭಾಗ್ಯವತಿಯೆಸ್ನುತಾ ॥
ಅನಿಬರರಸನನೆಂತು ಶರಣೆಯೊರಸುವಳೆಂದು
ಮನದಂದು ನಿಂದಿಸಿದರಾಗ ಜನತೆಯೊಳಿಂತು
ಧ್ವನಿಯಾಗುತಿರೆ ರಾಜಸೇವಕರ ಸುವ್ಯವಸ್ಥೆಯ ಕ್ರಮವು ನಡೆಯಲಾಯ್ತು ॥೧೮॥

ಸಮಯವ್ಯೆತಿಕ್ರಮಣವಾಗಬಾರದು ಹೊರಡಿ
ನಿಮಗಿದೊಳಿತಾಗದೆನಲಾ ನೃಪನ ನುಡಿಗಗಿದು
ಸುಮತಿಯಾಗಳೆ ಮುಂದೆ ನಡೆಯಲು ಮಹಾದೇವಿ ಪಿತಗೆ ವಂದಿಸಿ ನಡೆದಳು ॥
ರಮಣೀಯಮಾದ ಮೇಣೆಯನೇರಲಾ ಮಾತೆ
ನಮಿಸುತ್ತೆ ಶಿವಶರಣೆಯಾರೋಹಿಸುತ್ತಿರಲು
ಸಮತೆಯಿಂದೆತ್ತಿದರು ಸಿಬಿಕೆಯಂ ಕಿಂಕರರು ನೃಪತಿ ಸೂಚನೆಯಾಗಲು ॥ ೧೯ ॥

ತಂದೆಹತ್ತಿರ ನಿಂದು ಶೋಕಿಸುತ್ತಿರಲ್ಕಾ
ಯಿಂದುವದನೆಯ ಮೇಣೆಯೊಳಗೆ ದುಃಖಿಸುತಿರಲ್
ಕಂದುನೋಳ್ಪರ ಚಿತ್ತಮೃಗಮಶ್ರುಘನ ನದಿಯನ್ನೈದಿ ಮುಳುಗಿತು ಸಹಿಸದೆ ॥
ಬಂಧುರದರಾಜಾಜ್ಞೆಯಂತೆ ಮೇಣೆಯು ಸಾಗ–
ಲಂದವೆನೆ ರಥದೊಳಗೆ ಕುಳ್ಳಿರ್ದು ನೃಪವರನು
ಹೊಂದಿದಾನಿರ್ಮಲನನೀಕ್ಷಿಸದೆ ಸಾಗಿದನು ಮೋಹಾಬ್ಧಿಯೊಳ್
ಮುಳುಗುತ ॥ ೨೦ ॥

ಸಿಡಿಲು ಬಡಿದಂತಾಗೆ ನಿರ್ಮಲನು ಮೂರ್ಛೆಯಂ
ಪಡೆದು ಬೀಳುತ್ತಿರಲು ಜನರು ನೆರೆದುಪಚರಿಸಿ
ಬಿಡದೆ ನಿಳಯಕೆ ತಂದು ಸಲೆ ಮಲಗಿಸಿ ಪೋಗಲೆಚ್ಚತ್ತು ಶೋಕಿಸುತ್ತ ॥
ಪೊಡವಿಪನು ಕೊನೆಗೆ ತೋರಿದ ಧೂರ್ತತನವು ತ–
ನ್ನೊಡಲಿಂಗೆ ಮುಳ್ಳಿನಂತಿರಿಯುತಿರೆ ಸಹಿಸದಲೆ
ಕಡುನೊಂದುಪಾಯವನು ಯೋಚಿಸುತ್ತಿರ್ದನತಿ ಚಿಂತೆಯೊಳು ಕಳವಳಿಸುತ ॥೨೧॥

ಅರಮನೆಗೆ ನಡೆದಾಮಹಾದೇವಿಯುರುಮನಕೆ
ಸಿರಿಮನೆಗೆ ಪೋಪಂತೆ ಸಂಕಟವು ಜನಿಸುತಿರೆ
ಮರೆದು ನಿಜಮಾತೆಯೊಡನುರುತರ ಶಿವಾನುಭವಗೋಷ್ಠಿಯೊಳು ಬೆರೆದಿರ್ದಳು ॥
ಹರನ ಪ್ರಾರ್ಥಿಸುತಿಹಳು ಪಿತೃಗಳಿಗೆ ಸುಖವೀಯೆ
ಪರಮಕೃಪೆಯಂ ತನಗೆ ಸತತಮೀಯೆಲುಬೇಡು-
ತಿರಲನಿತರೊಳು ರಾಜಸದನಕ್ಕೈದಿತು ಮೇಣೆಯಾನುಮತಿಯುುಸುರಿಡಲ್ಕೆ ॥ ೨೨ ॥

ಅರಸನಮನಂ ತಾನು ಮಾದೇವಿಗಾವಾಗ್ಗೆ
ನೆರೆ ತನ್ನ ವೈಭವವ ತೋರ್ದಪೆನೋ ಮತ್ತೆ ತಾ-
ನಿರದವಳೊಡಂ ಸರಸಸಲ್ಲಾಪವಾಡುವೆನೊ ಮತ್ತವಳನಾವಾಗ್ಗೆ ತಾ- ॥
ನಿರುಕಿಸುತೆ ಹರುಷಿಪೆನೊ ಮುಟ್ಟೆ ಸಲೆ ಮೋದಿಪೆನೊ
ತರಳಾಕ್ಷಿಯುಂ ಬಿಡದಲಾವಾಗಳಪ್ಪುವೆನೊ
ಪರಮಶಶಿಮುಖಿಯನಾನಾವಾಗ್ಗೆ ಮುದ್ದಿಪೆನೊಯೆಂದು ಬೆಂಬಿಡದೈದಿತು ॥ ೨೩ ॥

ಎನಲು ಮೇಣೆಯ ಬಿಡದೆ ತಪ್ಪ್ರಥವು ಸಾಗಿಹುದು
ಜನರಿಗೀ ಕಥೆಯರಿವ ಮಾಡಲಂಜುತೆ ರವಿಯು
ಜನಪತಿಯ ಕೃತ್ಯವನು ನೋಡಲಗಿಯುತೆ ನಿಲದೆ ಪಶ್ಚಿಮಾದ್ರಿಗೆ ಪೋದನೋ ॥
ಎನುವಂತೆ ಪೊಳ್ತು ಮುಳುಗುತ್ತಿರಲ್ಕರಮನೆಗೆ
ಜನಪನ ರಥಂ ಬರಲು ಮೇಣೆಯಂತಃಪುರಕೆ
ಘನದಾಸ ದಾಸಿಯರ ಬಳಗದೊಂದಿಗೆ ಸಾಗಲೀಕ್ಷಿಸುತೆ ನೃಪನಿಳಿದನು ॥ ೨೪ ॥

ಒಳಬೀದಿಯಿಂ ನೃಪತಿಯೈದಿ ರಾಜ್ಞೀವಾಸ-
ದೊಳಪೊಕ್ಕು ಸತ್ಕಾರ ಸುವ್ಯವಸ್ಥೆಯ ಗೈದು
ಕಳಿಸುತೆ ನಿಜಸತೀಪರಿವಾರಮುಂ ತಾನು ಪಿಂದಿರ್ದು ತದ್ರೂಪವ ॥
ಕಳೆನೋಟದಿಂ ನೋಡುವಾಶೆಯೊಳಗಿರೆ ಮೇಣೆ-
ಯಿಳಿಯಿತಾಕ್ಷಣವೈದುತಲ್ಲಿ ಸ್ತ್ರೀಸಮುದಾಯವು
ಮಿಳಿತವಾಗುತಲಾ ಮಹಾದೇವಿಯಂ ಕಾಣುತಿಳಿಸಿ ಸತ್ಕರಿಸಿತಾಗ ॥ ೨೫ ॥

ಮಾತೆಯಿಂಸಹಿತಳಾದಾಶರಣೆಯಂ ನೃಪನ
ಭೀತಿಯಿಂ ಮನ್ನಿಸುತೆ ಕರೆದೊಯ್ದು ಮಂದಿರದೆ
ಪ್ರೀತಿಯಿಂ ಸುವ್ಯವಸ್ಥೆಯ ಮಾಡುತಿರಲರಸನೈದಿ ಯೋಗಕ್ಷೇಮವ ॥
ಸಾತಿಶಯವೆನೆ ವಿಚಾರಿಸುತಲುಪಚರಿಸುತ್ತ-
ಲೋತುಕೈಂಕರ್ಯಮಂವಹಿಸಿ ಸುಮತಿಯನೊಲಿಸಿ
ಖ್ಯಾತಿಯಿಂ ನಿಜರಾಜ್ಯವೈಭವವ ತೋಸುತ್ತಿರೆ ಮಹಾದೇವಿ ಗಾಗ ॥ ೨೬ ॥

ಮಿಗೆ ಶಂಕೆಗೊಳಿಮನವು ಶರಣೆ ಶಿವನಂ ನೆನೆದು
ಬಗೆಯೊಪ್ಪುತಿರಲರಸಗಿಂತೊರೆದಳಾದೇವಿ
ಸೊಗವಾಯಿತೈನೃಪನೆ ನೀವು ಶಿವದೀಕ್ಷೆಯಂ ಪಡೆವುದೆಂದದನು ಪೇಳು ॥
ಮೃಗನಯನೆಯೆನಲಾಗಳಾವಚನವಂ ಕೇಳು-
ತಗಿವಾನೃಪಂ ಪೇಳ್ದನದಕನಿರ್ವಾಹದಿಂ
ಸುಗುಣವತಿಯೇಯಿದುರಹಸ್ಯವಿಷಯಂ ಗೌಪ್ಯವಾಗಿ ಪೇಳುವೆನಿಲ್ಲಿ ಬಾ ॥ ೨೭ ॥

ಎನೆ ಮಹಾದೇವಿಯೊರ್ವಳೆ ರಾಜನೊಂದಿಗಾ-
ತನ ಸದೇಕಾಂತಮಂದಿರಕೆ ಶಿವನಂ ನೆನೆಯು-
ತನಘೆ ಬಂದಳು ವಿಕೃತಿ ಪೆಚ್ಚಲ್ಕೆ ಕೌಶಿಕಂ ಮಾತನಿಂತಾಡುತಿಹೆನು
ವಿನುತೆ ಕೇಳೆನಗೆನ್ನ ಮತವ ಬಿಡಲಿಷ್ಟವಿ-
ಲ್ಲನಿಯಳೆ ದಯೆಯ ತೋರು ಮಮ ಮತನ ಸ್ವೀಕರಿಸಿ
ಘನತೆಯಂ ಪಡೆ ನೀನೆ ಜೈನ ಧರ್ಮದೊಳೆನಲು ಕೋಪಿಸಿ ಮಹಾದೇವಿಯು॥೨೮॥

ಎನಿದೈ ನೃಪನೆ ನಿನಗಿಷ್ಟವಿಲ್ಲದಿರೆನಗೆ
ನೀನೊಲಿದು ಮಾತನೇಕಿತ್ತೆಯೈ ಬಿಡುಪೋಪೆ
ನಾನು ತವಧರ್ಮಮಂ ಸ್ವೀಕರಿಸಲಿಕ್ಕೆ ಬಂದವಳಲ್ಲವೀಲಗ್ನನಾ ॥
ನಾನು ನೆನೆದವಳಲ್ಲ ಶಿವಧರ್ಮಮಂ ಬಿಡುವ
ಹೀನ ಕಾಮ್ಯತೆಯೆನಗದೇಕೆ ಬೇಕೈ ಪೇಳು
ಜ್ಞಾನದೆ ವಿಚಾರಿಸುತ ಕಳುಹಿಕೊಡು ಮನೆಗೆನ್ನ ನಿನಗೆ ಕೀರ್ತಿಯು
ಬರುವದು ॥ ೨೯ ॥

ರಾಜನೊರೆದಂ ಕೇಳಿ ಕೀರ್ತ್ಯಕೀರ್ತಿಯಕಾಂಕ್ಷೆ
ನೈಜಮಾಗೆನಗಿಲ್ಲವಾನು ಬೇಡುವದು ನೀ-
ನೋಜಧರಾಮೃತದ ಪಾನವಂ ಸುರತಸುಖಭೋಗಮಂ ಪ್ರೇಮದಿಂದ ||
ಮಾಜದಲೆ ಯಾಚಿಸುವೆ ನೀನು ಮುದದಿಂದೆ ಕಡು-
ಮೋಜಿನಿಂದೀಯಲೊಪ್ಪದಿರಲ್ಕೆ ನೃಪಸಿರುವೆ
ತೇಜದಿಂ ನಿನ್ನವಶಮಾಡಿಕೊಳ್ಳುವೆನೀಗ ದೀಕ್ಷೆಯಂ ಪಡೆಯಲೇಕೆ || ೩೦ ||

ಈ ಮನವನರಿಯುತ್ತೆ ಮಾದೇವಿ ಶಿವಶರಣೆ-
ಯಾ ಮಹಾರಾಜಗಂಜದಲೆ ಪೇಳಿದಳಿಂತು
ಸೀಮೆಯಂ ಮೀರಿ ನೀ ಮಾತನಾಡದಿರಯ್ಯ ನಿನಗೆ ರಾಜ್ಯದ ಬಲವಿರೆ ||
ಸೋಮಧರಸುರು ಬಲವು ಸಾರಿಹದು ದಿಟವೆನಗೆ
ಪ್ರೇಮದಿಂ ನಡೆ ನೀನು ಮಾತನಾಡಿರುವಂತೆ
ಕಾಮಿಯಾಗಲುಬೇಡ ವೀದೇಹದೊಳಗೇನು ಸಾರವಿಲ್ಲರಿ ಪೇಳ್ವೆನು || ೩೧ ||

ಮಿಲಿತ ಮೂತ್ರದ ಕುಡಿಕೆ ಮಾಂಸದಾಮಡಿಕೆಯಿದು
ಎಲುವಿನಾ ತಡಿಕೆಯಿದಮೇಧ್ಯದಾ ಹಡಿಕೆಯಿದು
ಸಲೆಕೇಸಿನಾ ಹಡಿಕೆ ಸುಡಲೀ ಕುದೇಹವನ್ನೊಡಲವಿಡಿದರಿ ಬೇಗನೆ ||
ತಿಳುವಳಿಕೆಯಿಂ ಚೆನ್ನಮಲ್ಲಿಕಾರ್ಜುನನನ್ನು
ಫಲಿತಾರ್ಥದಿಂ ವಚನಮಂ ರಚಿಸಿ ತಿಳುಹಲ್ಕೆ
ತಳಮಳಿಸಿ ರಾಜನಿಂತಾಡಿದನು ಕೋಪದೊಳು ವೇದಾಂತಮಂ ನಿಂದಿಸಿ || ೩೨ ||

ಏತಕುಪಯೋಗವೀ ವಿರಸವೇದಾಂತೋಕ್ತಿ
ಮಾತನಾಡುತಲೆನ್ನ ಮನವ ನೋಯಿಸೆಯೇಕೆ
ಖ್ಯಾತಭೋಗದ ಕಾಯಮಂ ನಿಂದಿಸುತ ನುಡಿವೆ ನಿನಗೆ ನಿಂದ್ಯವಿದಾದರೆ ||
ಪೂತಮೆನಗೀ ನಿನ್ನ ದೇಹವಮೃತದ ಘಟವಿ-
ದೋತು ಪಾಕದ ರುಚಿಯು ಪಾತ್ರೆಯೇನರಿಯುವದೆ
ಪ್ರೀತಿಯಿಂದಿಧನರಿದು ನೀನೊಪ್ಪದಿರೆ ಬಲಾತ್ಕರಿಪೆ ನಾನೀಗಳಿನಲು || ೩೩ ||

ಆಗಲೈ ಯೇನಹುದು ಶಿವನಿಚ್ಛೆಯುಂ ತಪ್ಪು-
ದಾಗಜವನೇರಿ ಪೋಪನ ಶುನಿಯು ಕಚ್ಚುವದೆ
ಭೋಗಕಾಯದ ನಿಜವನಿನಗೀಗ ತೋರ್ಪೆನೈ ನೋಡೆಂದು ನಲಿದಾಡುತ ||
ರಾಗಮಂ ತೊರೆದು ಶಿವನಂ ನೆನೆಯುತಂ ಮನದೆ
ವೇಗದಿಂ ತೆಗೆದೊಗೆದು ವಸ್ತ್ರಭೂಷಣವೆಲ್ಲ-
ವಾಗಲೆ ದಿಗಂಬರಳು ತಾನಾಗಿ ಕೇಶಪಾಶವ ಬಿಚ್ಚಿ ಹೊರಹೊರಟಳು ||೩೪||

ನೋಡುತಾ ಸ್ಥಿತಿಯನ್ನು ಬೆರಗಾಗಿ ನೃಪವರ್ಯ-
ನೋಡುತ್ತೆ ಮುಂದೈದಿ ತಾಯೆ ತಪ್ಪಾಯಿತೆಂ-
ದಾಡುತ್ತೆನಮಿಸಿತನ್ನಪರಾಧಗಳನೆಲ್ಲ ಕ್ಷಮಿಸೆಂದುಬೇಡ್ವನಿಂತು ||
ಮೂಢನಾ ಜನನಿಯಾನತಿಪಾಪಿಯಾಗಿಹೆನು
ನಾಡೆಲ್ಲ ನಿನ್ನ ಶಿವಶರಣೆಯೆಂದರಿಯುತಿರೆ
ಮಾಡಿದೆನು ನಿನ್ನಲ್ಲಿ ಸ್ತ್ರೀಭಾವಮಂ ತಳೆಯುತೀ ಪ್ರಮಾದವ ಮನ್ನಿಸಾ ||೩೫||

ಈರೀತಿಯೈದಬೇಡೆನಗಪಯಶಂ ಬರ್ಪು-
ದೋರಂತೆ ನಿನಗಿಚ್ಛೆಯಿರ್ದನಿತು ವಸ್ತ್ರಮಂ
ಸಾರಜ್ಞಳೇ ಭೂಷಣವ ಧರಿಸಿ ಪೋಗುನಾನಾಗ ನಿನ್ನಂ ಕಳಿಸುವೆ ||
ವೈರಾಗ್ಯದಿಂ ಮಹಾದೇವಿಯಿಂತಾಡಿದಳು
ಭೋ ರಾಜ ದೇಹಮಿದುಮೊಂದ್ಮುದಿನಮಿಂತಹುದು
ಸಾರತ್ತ ಲೇಸಾಯ್ತು ಜಗವು ನಿನ್ನಪಕೀರ್ತಿಯಿಂ ಬುದ್ಧಿಗಲಿಯುತಿಹುದು ||೩೬||

ಇಂತೊರೆದು ಸ್ವೇಚ್ಛೆಯೊಳು ಹೊರಬರಲ್ಕನಿತರೊಳು
ಶಾಂತಮಾತೆಯು ನೋಡುತೇನಿದೇನಿದೆನುತ್ತೆ
ಭ್ರಾಂತಿಯೊಳು ಹೌಹಾರಿ ನಿಂದಿರಲು ಶಿವಶರಣೆ ನಮಿಸುತೋಡಿದಳು ಮುಂದೆ ||
ಚಿಂತೆಯೊಳು ಗಡಬಡಿಸಿ ಬೆಂಬತ್ತಿದಳು ಬಿಡದೆ
ಸ್ವಾಂತದೊಳು ಚೆನ್ನಮಲ್ಲೇಶನಂ ನೆನೆಯುತ್ತೆ
ಕಾಂತೆಯರಮನೆಯನ್ನು ತೊರೆದು ಬಂದಳು ದಾಸದಾಸಿಯರು ಬೆರಗಾಗಲು ||೩೭||

ನಿರಭಿಮಾನದೆ ಬೀದಿಗೈದುತಿರೆ ತನ್ಮಾತೆ
ಯಿರದೆ ಮುಂದೈದಿ ಮಾದೇವಿಯ ತಡೆದು ಸಲೆ-
ಕರವ ಪಿಡಿದಿಂತೊರೆದಳಾ ಸುಮತಿ ಮಾನವತಿ ಸುವಿರಕ್ತಿ ಮಾನಿತಳಿಗೆ ॥
ಸರಿಯಲ್ಲವಿದು ಮಗಳೆ ನಿನ್ನ ಸೌಶೀಲ್ಯಕ್ಕೆ
ನೆರೆ ವಿಚಾರಿಸು ನಿನ್ನ ಮನದೊಳೀನಿರ್ದೊಡೀ-
ತೆರದೆ ವಸನವನೀಗಿ ತಿರುಗಿದರೆ ನಿನಗೆ ಜನರತಿ ಮೂಢಳೆನ್ನುತಿಹರು ॥ ೩೮ ॥

ಈ ವಚನಮಂ ಕೇಳ್ದು ತನ್ಮಹಾದೇವಿಯಾ
ಪಾವನ ಚರಿತ್ರಳಿಗೆ ಮಾತನಾಡಿದಳಿಂತು-
ವೀಃ ವಸುಮತೀ ಜನರದಾವನಂ ಬಿಟ್ಟಹರು ಪರಮೇಶ್ವರನಿಗಾದರೂ ॥
ಆವದಾದರು ದೋಷಮಂ ಸಲಿಸಿ ನಿಂದಿಸುವ
ರಾವಿರಾಗವನೆಮ್ಮದವರಿದನು ಲೆಕ್ಕಿಸರು
ಕೋವಿದಳು ನೀನಿರುವೆ ಮಾತೆಯನ್ನಕ್ಕರಿಂ ಕಳುಹಿಕೊಡು ಕಲ್ಯಾಣಕೆ ॥ ೩೯ ॥

ಶರಣರನುಭಾವ ಮಂಟಪದೊಳಗೆ ನಾನಿದ್ದು
ವರ ಚೆನ್ನಮಲ್ಲಿಕಾರ್ಜುನ ಪತಿಯ ಸುಜ್ಞಾನ-
ದಿರವ ನಾನುರೆ ತಿಳಿದು ಪತ್ನಿಯಾಗುವೆನವಗೆ ಕೀರ್ತಿಯಂ ನಿಮಗೀವೆನು ॥
ಪರತರಾಶೀರ್ವಾದವಂ ಗೈಯಿರೆಂದೆನಲು
ವರ ಸುಮತಿಯೆಂದಳಾನದನುಗೈಯುವಳಲ್ಲ
ಪಿರಿಯರಿಂದಾಶಿಸುವ ಪೊಂದುತಿಹುದೊಳಿತು ನಡೆ ಮನೆಗೆನಲ್ಕನಿತರಲ್ಲಿ ॥ ೪೦ ॥

ನಿರುಮಲನು ಬಂದನಾಗೀ ವಾರ್ತೆಯಂ ಕೇಳಿ
ಪರಿಪರಿಯುತೀಸುದ್ದಿ ಹಬ್ಬುತಿರೆ ಜನರೊಡನೆ
ಬರುತೆ ತತ್ಪಿತನೈದೆ ಮಗಳ ಸ್ಥಿತಿಯಂ ಕಂಡು ಬೆರಗಾಗಿನಿಂದನಗಿದು ॥
ಉರು ದುಃಖದಿಂ ಸತಿಯು ಸುತೆಯು ನಮಿಸುತ್ತಿರಲು
ಪರಮ ಸಂಕಟವಾಗೆ ಮಾತನಾಡಿದನಿಂತು
ತ್ವರಿತದಿಂ ಪೇಳು ಪ್ರಿಯೆ ರಾಜನೆಸಗಿದ ಕಥೆಯ ನೆನಲು ಸುಮತಿಯು
ಖೇದದೆ ॥ ೪೧ ॥

ಪೇಳಿ ದುಃಖಿಸುತಿರಲು ಜನರು ಮರಗುತ್ತಿರಲು
ಕೇಳಿದಾ ನಿರ್ಮಲನು ಕೋಪಮಿಶ್ರಿತಮಾದ
ತಾಳಲಸದಳಮಾದ ದುಃಖದೊಳು ರಾಜನಿಗೆ ಬೈಯತೊಡಗಿದಸಗಿಯದೆ ॥
ತಾಳಿ ಖೇದವ ಜನತೆಯಾನೃಪನ ನಿಂದಿಸುತೆ
ಮೇಳವಿಸಿ ಕೂಗುತಿರೆ ತನ್ಮಹಾದೇವಿಯುರು-
ಶೀಲಮಂ ಬೋಧಿಸಿದಳಿಂತು ನೆರೆದಾ ಜನಕೆ ಬೆರಗಾಗುವಂತೆ ನಿಂದು ॥ ೪೨ ॥

ತಾಳ್ಕೆಯೆ ತಾಳಿದುದು ಬಾಳುವದು ಲೋಕದೊಳು
ತಾಳುವಿಕೆಯಿರಬೇಕು ತಾಳ್ಮೆಯೇ ಜಗದ ಜೀ-
ವಾಳವಾಗಿಹುದಿದನು ತಿಳಿದಿನ್ನು ತಾಳಿ ಮಗೆ ನೀತಿಯಿಂ ನಡಿಯಿರಯ್ಯ ॥
ತಾಳಿಕೆಯ ಬಲದಿಂದ ಜಡಭೂತ ಪಂಚಕವು
ತಾಳುತಾ ದೇವತ್ವಮಂ ಪೂಜ್ಯಮಾಗಿಹುದು
ತಾಳಿನೊಳಗಿಹುದೆಲ್ಲವೀಗುಣವೆ ವಿಶ್ವಕ್ಕೆ ಮೇಲಾಗಿ ಮೆರೆವುದರಿಯೆ ॥ ೪೩ ॥

ಇದಕೆ ಸಂಸ್ಕೃತದಲ್ಲಿ ಸಹನತಾಕ್ಷಮೆಗಳೆಂ-
ದೊದಗಿಹವು ನಾಮಗಳು ಶಾಂತಿ ಶಮೆಯೆಂದೆರಡು
ಸದಮಲಾಹ್ವಯಗಳಿವು-ವರಯೋಗಶಾಸ್ತ್ರದೊಳಗೆಸೆದಿಹವು ಕೇಳಿರಯ್ಯ ॥
ಪದುಳದಿಂದದನರಿದು ಪಾಲಿಪಗೆ ಸಹಜಮೆನ-
ಲುದಿಸುವದು ಚಿತ್ತನಿಗ್ರಹವರಿಯಲಿದರಿಂದೆ
ಪದಳ್ದು ಬಹಿರಿಂದ್ರಿಯಂಗಳ ಶಮನವಾಗುತಿಹುದಾಗಿದುವೆ ದಮೆಯೆನಿಪುದು ॥ ೪೪ ॥

ಮನವೆರಸಿದಿಂದ್ರಿಯಂಗಳ ನಿಗ್ರಹಂ ನರಗೆ
ಘನಪೂಜ್ಯತೆಯನೀಯುತಿಹುದು ಸಹಜಮೆನಲ್ಕೆ
ಮುನಿವರಂ ತಾನೆನಿಪವಿದು ಶಿವಜ್ಞಾನಕ್ಕೆ ಮೂಲಮಹುದೀಜ್ಞಾನವೇ ॥
ವಿನುತ ಪರಮಾತ್ಮನೆಮ್ಮಾತ್ಮವೆಂದರಿಪುತಿಹು
ದನುಪಮಾತ್ಮವೆ ಸರ್ವಜಗವೆಂದು ತೋರುತಿಹು-
ದನಘ ಸುಜ್ಞಾನವಿದು ದೃಢವೆನಿಸಬೇಕಾದೊಡಾ ನಂಬುಗೆಯು ಬೇಕು ॥ ೪೫ ॥

ನೆರೆ ನಂಬುಗೆಯೆ ಪರಮಭಕ್ತಿಯೆಂದೆನಿಸುತಿಹು-
ದರಿವಿನಿಂದೆಸವ ಪರಭಕ್ತಿಯಿಂ ಮಾಡುವಾ-
ಚರಣಮೆಲ್ಲವು ಶೀಲಮೆನಿಸುವದು ತಿಳಿಯಿರೈ ಕಾಮಾದಿಗಳನಳಿವುದು ||
ವರಭಕ್ತಿಯಿಲ್ಲದಲೆ ಮಾಳ್ಪಶೀಲಂ ತಿಳಿಯ-
ಲುರುನದಿಗೆ ಜಲವಪ್ಪೊತ್ತ್ರವನಂತೆ ನಿಷ್ಫಲವು
ಚರಿಸಿರೈಯಿದನರಿದು ವ್ರತನೇಮಗಳನೊಲಿದು ಜಡಿರಿ ಕಾಮಾದಿಗಳನು || ೪೬ ||

ಶೀಲಶೀಲೆಂಬಿರೈಯರಿತವರು ಹೇಳಿರೈ
ಶೀಲದುರೆನೆಲೆಯರಿಯದವರದನು ತಿಳಿಯಿರೈ
ಕೇಳಿ ಕಾಮ ಕ್ರೋಧ ಲೋಭ ದುರ್ಮೋಹ ಮದಮಾತ್ಸರ್ಯವಾಮಿಷವದು ||
ಮೇಲೆನಿಸ ಭವಿಗಳಿವು ತನ್ನೊಳಗೆ ನೆಲೆಸಿರಲ್
ಕೀಲಿಂಗವಿರದವರ ಭವಿಯೆಂದು ನುಡಿವಿರೈ
ಮೇಲೆಯಚ್ಚಪ್ರಸಾದಿಯುರಿ ನಿಚ್ಚಪ್ರಸಾದಿ ವರಸಮಯಪ್ರಸಾದಿ || ೪೭ ||

ಎಂದು ತಾವಾಜಲಕೆ ಬಿಡದೆ ಕನ್ನವನಿಕ್ಕಿ
ತಂದುದಕಮಂ ಮತ್ತೆ ಲಿಂಗಕ್ಕೆ ಮಜ್ಜನವ
ಕುಂದದೆರೆಯುವ ಹಗಲುಗಳ್ಳರನು ನಂಬುವನೆ ವರಚೆನ್ನಮಲ್ಲಿನಾಥ ||
ಚೆಂದದಿಂದೀ ವಚನಮಂ ರಚಿಸಿ ಪಾಡಲಾ-
ನಂದದಿದೆಲ್ಲ ಜನರೊಪ್ಪಿ ಕೈಚಪ್ಪಾಳಿ-
ಯಿಂದೆ ಸಮ್ಮತಿಸುತಿರಲನಿತರೊಳು ಸೀರೆಯಂ ತಂದಿತ್ತಳಾ ಮಾತೆಯು ||೪೮||

ಕೊಳ್ಳದೆ ಮಾಹಾದೇವಿ ವೈರಾಗ್ಯದಿಂದಿಂತು
ಸಲ್ಲಲಿತಮಾಗಿ ಪೇಳಿದಳವ್ವ ನಾನಿದನು
ಕೊಳ್ಳೆನೌಯೆನ್ನಪತಿ ಚೆನ್ನಮಲ್ಲಾರ್ಯನಿದ್ದಂತೆ ನಾನಿರ್ಪೆನವ್ವ ||
ಸಲ್ಲದೀ ಮಾತು ತಿಳಿದದ್ವೈತವಿದನು ಕ್ರಿಯೆ-
ಯಲ್ಲಿ ಬಳಿಸಲು ಬಾರದೌ ಮಗಳೆ ದ್ವೈತವದ-
ನುಲ್ಲಸಿತ ಭಾವದೊಳು ಭಾವಿಸಲ್ಕಾಗದೌಯೆಂದು ನಿರ್ಮಲನೊರೆಯುತ ||೪೯||

ಮತ್ತೊರೆದನವ್ವಯೀದೇಹಕ್ಕೆವಸನಾನ್ನ-
ಮತ್ಯಗತ್ಯವು ತಿಳಿಯಲೊಂದರಿಂ ಮರ್ಯಾದೆ
ಮೊತ್ತಮೊಂದರೊಳಹುದು ಜೀವನವು ಚೆನ್ನಮಲ್ಲಾರ್ಯನಿಗೆ ತನುವಿದಿಲ್ಲ ||
ಉಕ್ತ ವಸ್ತ್ರಾಶನಗಳಾವಶ್ಯಮುವಗಿಲ್ಲ
ಉತ್ತಮ ಸುಭಾವದಿಂದರ್ಪಿಸುತ ಗ್ರಹಿಪುದೌ
ಚಿತ್ರಗತ ಜೀವಂಗೆ ಭಾವಗತ ಪರಮಾತ್ಮನೇ ಸತಿಯು ಮಗಳೆ ತಿಳಿಯೌ ||೫೦||

ಇದಕೊರೆದಳಾ ಮಾಹಾದೇವಿ ಪಿತಗೆರಗುತ್ತ-
ಲಿದುವೆಮ್ಮ ಮತವಲ್ಲ ಜನಕ ನೀನೆನಗೆ ಪೇ-
ಳಿದುದನೊರೆವೆನು ಕೇಳು ಭಾವವೇ ಪ್ರಾಣವಾಗಿಷ್ಟವಾಗೀದೇಹವ ||
ಪದುಳ್ದಲಿಂಗಾಖ್ಯೆಯೊಳು ಪರಮಾತ್ಮನೇ ಹೊಂದಿ
ಸದಯ ಪತಿಯೆಂದೆನಿಸುತಂಗಾಹ್ವಯವತಳೆದು
ವಿದಿತಸತಿಯಾಗಿಹನಿದೈಕ್ಯತೆಯ ಗುಟ್ಟು ತಿಳಿಯೆನಗವಗೆ ಭೇದವಿಲ್ಲ || ೫೧ ||

ಲಿಂಗಕ್ಕೆ ವಸ್ತ್ರಮಂ ಧರಿಸುವಂತೀ ಸೊಗಯಿ-
ಪಂಗಕ್ಕೆ ವಸನಮಂ ಧರಿಸಲೇಬೇಕು ತಿಳಿ
ಭಂಗವಿಲ್ಲದೆ ನಡಿಸು ಮಾತೆಯೀವಚನವನು ನಿನ್ನ ವೈರಾಗ್ಯಕ್ಕಿದುವೆ ||
ಸಂಘಟಿಪ ಮಾತಿರುವದೆಂದು ಸುಮತಿಯು ನುಡಿಯೆ
ಮಂಗಳ ಮಹಾದೇವಿಯಾಕೇಶಪಾಶಮಂ
ಕಂಗೊಳಿಸ್ವವಂತೆ ನಿಜ ದೇಹಕ್ಕೆ ಸುತ್ತಿದಳು ಬಟ್ಟೆಯಿಂ ಮಿಗಿಲೆನಲ್ಕೆ || ೫೨ ||

ಎಲ್ಲರಚ್ಚರಿಯೊಡೆಯಲಾ ನಿರ್ಮಲಂ ಕಂಡು
ಸಲ್ಲಲಿತ ಭಾವದಿಂ ಮಗಳ ಸ್ಥಿತಿಯಂ ತಿಳಿಯು-
ತುಲ್ಲಸಿತ ವೈರಾಗ್ಯಕಂ ಮೆಚ್ಚಿ ಪುತ್ರಿಯಂ ಕೊಂಡಾಡಲಾದನಿನಿತು ||
ಬಲ್ಲವಳು ನೀನಿರುವೆಯವ್ವ ನಿನಗೊಪ್ಪಿದೆನು
ಲಲ್ಲೆಯಿಂ ನೀ ನಡೆವೆ ಶಾಸ್ತ್ರಕಿಮ್ಮಡಿಯಾಗಿ
ಕ್ಷುಲ್ಲಕರೆನಿಪ್ಪೆಮ್ಮನುದ್ಧರಿಸಲುದಿಸಿದ ಮಾಹಾದೇವಿಯೇ ನೀನಿಹೆ || ೫೩ ||

ಎಮ್ಮ ಮಗಳೆಂದು ನಿನ್ನಂ ತಿಳಿದುದೇ ತಪ್ಪು
ಹೆಮ್ಮಿಗರಿಗರಿಯದಿದೆನುತ್ತೆ ವಂದಿಸಲಾಗ
ನೆಮ್ಮಿ ಸುಮಿತಿಯು ಮತ್ತೆ ಪತಿಯಂತೆ ನಮಿಸುತಿರೆ ಮಾದೇವಿಯವರೀರ್ವರ ॥
ಒಮ್ಮನದೆ ನಮಿಸುತ್ತೆ ಮಾತನಾಡಿದಳಿಂತು
ನಿಮ್ಮ ತೊತ್ತಾನುಮೆನಗೇಕೆ ನಮಿಪಿರಿ ನೀವು
ಬಿಮ್ಮನಿಂ ಗುಬ್ಬಿಯೊಳು ಬ್ರಹ್ಮಾಸ್ತ್ರವೆಸೆದಂತೆಯೆನ್ನೊಳೆಸಗದಿರಿ ನೀವು ॥೫೪॥

ಶರಣರೆನ್ನಯ ಚೆನ್ನಪತಿಯು ಪರಮಾಪ್ತರೈ
ಎರಗುತವರಿಗೆ ಪತಿಯು ಕೃಪೆಯ ಪಡೆಯಲಿಕಾನು
ಪರಮ ಕಲ್ಯಾಣಕ್ಕೆ ಪೋಪೆನೈ ತಂದೆ ನೀವಾಶಿಷವ ಮಾಳ್ಪುದಯ್ಯ ॥
ಎರಗಿ ತಾಯ್ತಂದೆಗಳನಿಂತು ಯಾಚಿಸಲಾಗ
ಸುರಿಸುತಂ ಕಣ್ಣೀರನಾಮುಗಳ ಮೊಗವಿಡಿದು
ತೆರಳದಿರುವತ್ಸೆ ನಿನ್ನಂ ತೊರೆಯುತಿರಲಾರೆವೆನ್ನುತಾಪಾಲಿಸುವರು ॥ ೫೫ ॥

ಮಗಳೆಂದರುಂ ನೀನು ಮಗನೆಂದರುಂ ನೀನೆ
ಮಿಗೆಯಾಪ್ತಳುಂ ನೀನೆ ಮಿಗೆಯಿಷ್ಟಳುಂ ನೀನೆ
ಸೊಗದ ನೆಲೆಯುಂ ನೀನೆ ಸೊಗವೀವಳುಂ ನೀನೆ ನಿನ್ನ ಹೊರತಾರುಮಿಲ್ಲ ॥
ಬಗೆಯದಿರು ನೀನಿದನು ಕನಸಿನೊಳಗಾದಡುಂ
ಪಗಲಿರುಳು ನೀನೆಮ್ಮ ಸಮ್ಮುಖದೊಳಿರುತಿರಲಿ-
ಕಗಣಿತ ಮಹಾದುಃಖಗಳನು ಸಹಿಸುವೆವಾವು ನಿರ್ಮಲನು ನುಡಿಯಲಿಂತು ॥೫೬॥

ಸುಮಿತಿಯಾ ಶರಣೆಯುಂ ಬಿಗಿದಪ್ಪಿಕೊಳ್ಳುತ್ತ-
ಲಮಿತದುಖಾಶ್ರುವಿಂ ಸ್ನಾನವಂಗೈಯ್ಯಿಸುತೆ
ಮಮತೆಯಿಂ ಮಾತನಾಡಲ್ ತೊಡಗಿದಳು ಶೋಕವಾರಾಶಿಯೊಳ್ ಮುಳುಗುತ ॥
ಶ್ರಮವಿದೇಕೌ ಮಗಳೆ ನೀಪೋಪುದಾದೊಡೀ-
ಗೆಮಗೇಕೆ ಬೇಡೆಂಬೆ ನಡೆನಾವು ಬರ್ಪೆವೌ
ನಿಮಿಷವಾದರು ತವ ವಿಯೋಗಮಂ ಸಹಿಸವೀ ಪ್ರಾಣಗಳು
ಬರ್ಪವರಿಯೌ ॥ ೫೭ ॥

ಎಸುತೀರ್ವರುಂ ದುಃಖಸಾಗರದೆ ಮುಳುಗಿರಲು
ಜನತೆಯಾಜಲಧಿಯೊಳು ಘುಮುಕಲಾರಂಭಿಸಲ್
ಕನಘ ಶಿವಶರಣೆಗಾಗುಭಯ ಸಂಕಟಮೊದಗಲಾ ಶಿವಧ್ಯಾನವೆಂಬಾ- ||
ಘನನೌಕೆಯಂ ಪಿಡಿಯಲುಜ್ಜುಗಿಸಲಾಕ್ಷಣವೆ-
ಯನುನಯದೆ ನಿರ್ಮಲನು ಮಗಳಮುಖಮಂನೋಡು
ತನುಪಮಳೆ ನೀನೀಗ ಕಲ್ಯಾಣನಗರಕ್ಕೆ ಪೋಗುವುದ್ದೇಶವೇನು || ೫೮ ||

ಎಂದು ಕೇಳಲು ನುಡಿದಳಾ ಮಹಾದೇವಿಯದ-
ಕಂದು ಕೇಳೈ ಪಿತನೆ ಬಸವಾದಿಶರಣರೊಳ-
ಗಿಂದುನೀನೊರೆದತತ್ವವನುಚರ್ಚಿಪೆನಯ್ಯ ಸತ್ಯಮಂ ತಿಳಿಯಲಾನು ||
ಸಂದೆಗವ ನೀಗುವೆನು ಪ್ರಭುವರನ ದರುಶನದೆ
ಹೊಂದಿ ಸಾಕ್ಷಾತ್ಕಾರಮಂ ಲಿಂಗಪತಿವರನ
ಸುಂದರದ ನಿಮ್ಮ ಕೀರ್ತಿಯನೊಲಿದು ಬೆಳೆಸುವೆನು ಸೂದ್ದೇಶವಿದು
ಮುಖ್ಯವು || ೫೯ ||

ನಿರ್ಮಲನಿಗಾನಂದವಾಗಿರ್ದಡುಂ ಮಗಳ
ಊರ್ಮಿಯದು ಮೋಹರೂಪಾಗಿ ಮರೆಸುತಲಿತ್ತು
ಪೆರ್ಮೆಯಿಂಶೋಕಾಕೃತಿಯಳಂದುವರ್ಧಿಸುತ ಲಾವರಿಸಲಾಯ್ತು ಬಿಡದೆ ||
ಶರ್ಮಕಿಚ್ಛಿಪಸುತೆಯ ಮುಖ ವನೋಡುತೆ ಮತ್ತೆ
ನಿರ್ಮಿಸುತ್ಕೈಶಾಂತಿಯಾಕಾರದೊಳುನೇಹಮಂ
ಧರ್ಮದುರುಬಲದಿಂದ ಕೊನೆಗೆ ನಿಶ್ಚೈಸಿದಂ ತನಯಳಿಚ್ಛೆಯ ನಡಿಸಲು ||೬೦||

ಬಗೆಯುತಿಂತೆಂದನಾಗಲಿತಾಯೆ ನೀನೆನ್ನ
ಮಿಗೆ ಜಯಿಸಿರುವೆ ಪೋಗು ನಿನ್ನ ಸುಜ್ಞಾನಬಲ-
ಮಗಣಿತರನೆಲ್ಲ ಜಯಿಸುವದು ಕಲ್ಯಾಣದ ಶಿವಾನಭವ ಮಂಟಪದೊಳು
ಸೊಗಯಿಪಗ್ರಸ್ಥಾನಮೊದಗುವದು ನಿನಗೆನಲು
ಸುಗುಣವತಿಯಾ ಮಹಾದೇವಿಯೆರಗುತ್ತೆತದ
ಲಘುಸುಮತಿ ಮಾತೆಯನು ನಮಿಸುತಿರೆ ಪ್ರೇಮದಿಂದವಳೆತ್ತುತಾಲಿಂಗಿಸಿ ||೬೧||

ಮರೆಯದಿರು ಮಗಳೆ ನೀನೆಮ್ಮನೆಂದುಂ ತಿಳಿದು
ಸ್ಮರಿಸುತಿರು ದಿನಕೊಮ್ಮೆಯಾದೊಡುಂ ಕಲ್ಯಾಣ-
ಕರಮಪ್ಪುದೆಮಗೆ ಸಾಕನಿತರಿಂದೆಮ್ಮ ರಕ್ಷಣವವುದು ಜೀವಿಸರಿತು ||
ಉರೆ ಸೊಗವು ನಿನಗಪ್ಪುದೀಕುಲಕೆ ಬರ್ಪುದುರು-
ತರಯಶವು ಭಕ್ತಿಯೊಳ್ ಬಾಳದುವೆ ಸರ್ವಸುಖ-
ದರಮನೆಯು ನೀನೆಲ್ಲವರಿದವಳು ನಿನಗೇನು ಪೇಳುವದು ಪೋಗಿಬಾರೌ ||೬೨||

ಉಲ್ಲಿಸಿತಮನದಿಂದಲಾ ಮಹಾದೇವಿಯಾ-
ಗೆಲ್ಲರಿಗು ನಮಿಸುತ್ತೆ ಪೊರಡಲಾಕ್ಷಣದಲ್ಲಿ
ತಲ್ಲಣಿಸಿದರ್ ಜನರು ಪೋಪರೀತಿಯಕಾಣುತವರೊಳೋರ್ವನು ಧಾವಿಸಿ ||
ಅಲ್ಲಿ ಬಂದೆರಗಿ ನೀನಿಂತುಪೋಗದಿರವ್ವ
ಕ್ಷುಲ್ಲಕರು ಸಹಮಾಗಿ ನಿಂದಿಪರು ತಿಳಿಯವ್ವ
ಬಲ್ಲವಳು ನೀನಿರುವೆ ನೆರೆ ವಿಚಾರಿಸು ತಾಯೆ ನಿನಗೆ ಭೂಷಣವಲ್ಲಿದು ||೬೩||

ಅರಿದು ಬೆಟ್ಟದಮೇಲೆಯೊಂದು ಮನೆಯಂಮಾಡಿ
ಯುರುಮೃಗಗಂಳಿಗಂಜಿದೊಡದೆಂತು ಕೇಳಯ್ಯ
ಉರೆಸಮುದ್ರದ ತಡೆಯೊಳೊಂದು ಮನೆಯಂಮಾಡಿನೊರೆತೆರೆಗೆ ಬೆದರಲೆಂತು ||
ನೆರೆಸಂತೆಯೊಳಗೊಂದು ಮನೆಯ ಮಾಡುತ್ತಲುರು-
ತರಶಬ್ದ ಕಂನಾಚಿದೊಡದೆಂತುಕೇಳಯ್ಯ
ವರಚೆನ್ನಮಲ್ಲಿಕಾರ್ಜುನ ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಯು ||೬೪||

ಬಂದಡದು ಹಿಗ್ಗದಲೆ ತಗ್ಗದಲೆ ಮನದಲ್ಲಿ
ಯಂದಿಗಾದರು ಸಮಾಧಾನಿಯಾಗಿರಬೇಕು
ಯೆಂದು ವಚನವರಚಿಸಿ ಪೇಳಿ ಪೊರಡುತಿರಲ್ಕೆ ಜನರಾಗ ದುಃಖಿಸುತ್ತ
ನೊಂದುಬೆಂಬತ್ತಿರಲು ತಾಯ್ತಂದೆಗಳುಸಹಿತ-
ಮಿಂದುಧರ ಶರಣೆಯಾಗೀಕ್ಷಿಸುತೆ ನಿಲ್ಲಲೊರೆ-
ದಂದು ಹೊರಟಳು ಜವದೊಳನಿತರೊಳು ಪೆಣ್ಬಳಗವೈದಿನಮಿಸುತೆ
ಶೋಕದೆ ||೬೫||

ನೆರೆದಿಂತು ಕೇಳಿತಾಗಕ್ಕನಿನಗೀಗಳುರು-
ತರಮೆನಿಪ ಕಲ್ಯಾಣಪುರಕೆ ಪೋಗುವ ಮನವು
ನೆರೆಯುದಿಸಿತೇಕೆ ಪೇಳೆನಲಾ ಮಹಾದೇವಿಯೊರೆದಳಾ ಸ್ತ್ರೀನಿಕರಕೆ ॥
ಒರೆವೆ ಕೇಳಾನೊಂದು ಕನಸುಕಂಡೆನು ತಿಳಿದು
ನೆರೆಚಿಕ್ಕ ಜಡೆಯ ಸುಲಿಪಲ್ಲಗೊರವನು ಬಂದು
ನೆರೆದನೆನ್ನಂ ನೋಡುತಾನಾತನನ್ನಪ್ಪುತೆಳೆವೆಳಗು ಸಾನಂದೆನೌ ॥ ೬೬ ॥

ತಿಳಿಚೆನ್ನಮಲ್ಲಿಕಾರ್ಜುನನನ್ನು ಕಂಡುತಿಳಿ-
ವೆಳಗಂಗಿ ಪೋಪೆನೌಯೆಂದು ಪೇಳುತಲಿಂತು
ಬಳಿಸದಲೆ ಮತ್ತೊಂದು ಮಾತನ್ನೈದುತಲಿರ್ದಳಾಗನಿಬ್ಬೆರಗಿನೊಳಗೆ ॥
ಕಳಕಳಿಯೊಳೆಲ್ಲರುಂ ತಮಗೆ ಸಾಕಾಗುವನಿ-
ತೆಳಸಿ ನೋಡುತೆ ಮತ್ತೆ ಮರಳಲ್ಕೆ ತಮ್ಮೂರ್ಗೆ
ರೆಳೆಯಲಾವಮನವವಳ ತಾಯ್ತಂದೆಗಳು ದುಃಖಿಸುತಲಪ್ಪಿ ಮರಳ್ದರಂದು ॥೬೭॥

ರುಕುಮಾರೇಶ ಕರುಣೆಯಪಡೆದ ಪಂಚಾಕ್ಷ-
ರುಚಿರಾಖ್ಯನ ಕೃಪಾಸತ್ರದೊಳಗಿರ್ದು ಶ್ರಮ-
ೆರಸುಭಯ ಗಾನಸದ್ವಾದನ ಸುಗೀರ್ವಾಣ ಕರ್ನಾಟ ಭಾರತೋಕ್ತಿ ॥
ರಮಸಾಹಿತ್ಯಮಂ ಕಲಿತು ಜನ್ಮಾಂಧನೆನಿ-
ರುವಪುಟ್ಟಾರ್ಯಕವಿಯೊರೆದಕ್ಕಮಾದೇವಿ-
ುರು ಪುರಾಣದಲೆರಡನೆಯ ಕಾಂಡಮುಂ ಮುಗಿದುದಾಗುರು ಚರರು
ನಲಿಯಲು ॥ ೬೮ ॥

ಅಂತು ಸಂಧಿ ೬ ಕ್ಕಂ ಪದಗಳು ೩೮೩ ಕ್ಕಂ ಮಂಗಳಂ

|| ಶ್ರೀಗುರು ಸಿದ್ಧಲಿಂಗಾಯ ನಮಃ ||

# ಶ್ರೀ ಅಕ್ಕಮಹಾದೇವೀ ಪುರಾಣಂ

## ೭ ನೇ ಸಂಧಿ ಪ್ರಾರಂಭ

**ಸೂಚನೆ—** ಶಿವಶರಣೆಯಹ ಮಹಾದೇವಿಯಡವಿಯನೈದಿ
ಶಿವನ ಜಾನಿಸುತಧ್ವದಾಯಾಸವರಿಯದಲೆ
ಶಿವನ ರೂಪದೊಳೆಲ್ಲವರಿದು ವಚನವ ಪಾಡುತ್ತೈದಿದಳು ಕಲ್ಯಾಣಕೆ ||

ತಾನು ನವನಾಥರಂ ಗೆಲಿದು ಮೆರೆದವನೆಂದು
ಮಾನವರ ಲೋಕದೊಳು ತನಗಾರು ಸಮರೆಂದು
ಮಾನಾಭಿಮಾನದಿಂ ಮದ್ದಾನೆಯಂದದೊಳು ಜಗದೀಸಂಚರಿಸುತಿರುವಾ ||
ಮಾನಿಗೋರಖನಾಥಸೀಯಹಂಕಾರವನ
ನೂನಮೆನೆ ಖಂಡಿಸಲು ಪ್ರಭುವಲ್ಲಮಂ ಬಂದು
ಸ್ವಾನುರಾಗದೆ ಸಿದ್ಧಿಗಳ ನೆಲೆಯ ಬೋಧಿಸುತೆ ಪೊರೆದಂತೆ ಪೊರೆಯಲೆನ್ನ ||೧||

ಅತ್ತಲಾಸುಮತಿನಿರ್ಮಲರೈದಲುಡುತಡಿಯ-
ನಿತ್ತಲುಂ ಶಿವಶರಣೆಯಹ ಮಹಾದೇವಿತಾ-
ನೆತ್ತಲುಂ ನಿರುಕಿಸದಲೇನನುಂ ಕೇಳದಲದಾವುದಂ ನುಡಿಯದಲಜೆ ॥
ಸತ್ಯಶಿವಭಾವನೆಯು ಮೂಡಿಹುದು ಜಗಮಾಗಿ
ನಿತ್ಯಮೆನಲಾ ಚೆನ್ನಮಲ್ಲಿನಾಥನ ಹೊರತು
ಮತ್ತಿತರ ವಿಷಯಗಳು ಲೋಕದೊಳಗುಂಟೆಂಬ ಭಾವವೇ ಮಾಯವಾಯ್ತು ॥೩॥

ಅನಿತರೊಳು ಕೌಶಿಕನ ದಾಸದಾಸಿಯರೈದಿ
ಘನಶರಣೆಯಂ ನಮಿಸಿ ಪರವಶತೆಯಂ ತಿಳಿದು
ಘನತೆಯಿಂ ಮಾತನಾಡಿಸಿದರವಳಂ ತಾವೇ ನೃಪನಾಜ್ಞೆಯಂ ತಿಳಿಹಲು ॥
ಇನಿತು ನಿಲ್ಲಿರಿ ರಾಜನಾಜ್ಞೆಯಿಂಬಂದಿರುವೆ-
ವನಘ ವಚನವ ಕೇಳಿರಾ ನಾವು ಕಿಂಕರರು
ಮನವವನಿಗಿಲ್ಲ ನೀವೀರೀತಿ ಪೋಗುವದು ಸಾಗಿರುಡುತೀವಸನವ ॥೩॥

ಒಲ್ಲದಿರೆ ಮನೆಯೊಳಿರಬೇಕೆಂದು ಚಿನ್ನಪವ-
ನುಲ್ಲಸಿತಮೆನೆಗೈಯಲೆಂದೆಮ್ಮ ನಟ್ಟಿರುವ-
ಗಿಲ್ಲೆನ್ನದೆರಡರೊಳಗಾವುದಕ್ಕಾದಡೊಪ್ಪಿರಿ ನಿಮಗೆ ಕ್ಷೇಮವಹುದು ॥
ಎಲ್ಲಮಂ ತಿಳಿಸಿ ಸೇವಕರು ಸುಮ್ಮನೆ ನಿಲಲು
ಸಲ್ಲಲಿತ ವಾಣಿಯಿಂ ಪೇಳಿದಳು ಮಾದೇವಿ
ಒಲ್ಲರಂ ನೋಡುತಾ ನಾವದಕುವೊಪ್ಪೆನಾ ಪೋಗಿ ಪೇಳಿರಿ ನೃಪನಿಗೆ ॥೪॥

ಅರಿಯೆ ಪುರುಷನಮುಂದೆ ಸ್ತ್ರೀಯೆನಿಪ್ಪಭಿಮಾನ-
ಪರಿಯಾಗಿ ಕಾಡಿತ್ತು ಮಾಯೆಯಿದು ನೋಡಿರೈ-
ಯರಿಯೆ ಸ್ತ್ರೀಯಯುಳ ಮುಂದೆ ಪುರುಷನೆಂಬಭಿಮಾನವಾಗಿಕಾಡಿತ್ತು ನೋಡಾ ॥
ಅರಿಯೆ ಲೌಕಿಕ ಜನರಿಗೀ ಶರಣರುರುಚರಿತ-
ಮರಿಯೆ ಮರುಳಾಗಿ ತೋರುವದಾಗುಳುಂ ನೋಡಿ
ವರಚೆನ್ನಮಲ್ಲಿಕಾರ್ಜುನನೊಲಿದು ಶರಣೆಗಭಿಮಾನಮುಂ ಮಾಯೆಯಿಲ್ಲ ॥೫॥

ಎನುತೆ ವಚನವ ರಚಿಸಿ ಬೋಧಿಸುತಲವರನ್ನು
ಘನಮಾಹಾದೇವಿಯಕ್ಕನನುನಯದೆ ಕಳುಹಿದಳು
ಮನದೆನೊಂದಾಗ ಮತ್ತೀ ವಚನಮುಂ ಗೈದು ಪಾಡಿದಳು ನಲವೇರಲು ||
ತನುವಿಂಗೆ ನೆಳಲಾಗಿ ಕಾಡಿತ್ತು ಮಾಯೆಯಿದು
ಮನವಾಗಿ ಪ್ರಾಣಕ್ಕೆ ಕಾಡಿತ್ತು ಮಾಯೆಯಿದು
ಮನಕಿದೇ ನೆನಹಾಗಿ ಕಾಡಿತ್ತು ಮಾಯೆಯಾ ನೆನಹಿಂಗಿದರಿವಾಗುತ || ೬ ||

ಕಾಡಿತ್ತು ಮಾಯೆಯಿದು ಜಗದ ಜಂಗುಳಿಗಳಿಗೆ
ಕಾಡಿತ್ತು ಬೆಂಗೋಲನೆತ್ತುತಂ ಮಾಯೆಯಿದು
ನೋಡಯ್ಯ "ವರಚೆನ್ನಮಲ್ಲಿಕಾರ್ಜುನನೀನುನಲೆದೊಡ್ಡಿರುವಮಾಯೆಯ ||
ನೋಡಲಾರುಂ ಗೆಲ್ಲಲರಿಯಲೆಂದೆನ್ನುತ್ತೆ
ಪಾಡಿ ನಲಿಯುತ್ತೆ ಶಿವನಂ ನೆನೆದು ನೆರೆಮುದವ
ಕೂಡಿ ಕಲ್ ಮುಳ್ಗಳಂ ಬಿಸಿಲು ಚಳಿಮಳೆಗಳಂ ಲೆಕ್ಕಿಸದೆ ನಡೆದಳಾಕೆ || ೭ ||

ಹಸಿವು ತೃಷೆಗಳನವಳು ಮರೆದಿರ್ದಳಾಗಳುಂ
ಶಶಿಧರನ ಜ್ಞಾನಾಮೃತಾಸ್ವಾದದೊಳ್ ಬೆರೆದು
ವಸುಧೆಯೊಳಗಣ ತಾಪಸರ ತೆರದೆ ಭಿಕ್ಷೆಯುಂ ಬೇಡಲಿಲ್ಲೆಂದೆಂದಿಗು ||
ಹಸಿದು ಮನೆಮನೆಯ ತಿರಿದುಂಬಂತೆ ಮಾಡಯ್ಯ
ಒಸೆದು ನೀಡಲು ಬರಲು ಕೆಳಗೆ ಬೀಳ್ವಂತೆ ಗೈ-
ಒಸೆದಾನು ಕೊಳ್ವನಿತರೊಳಗೆ ಶುನಿಯೊಯ್ವಂತೆ ಗೈ ಚೆನ್ನಮಲ್ಲಾರ್ಯನೆ || ೮ ||

ಎಂದು ವಚನವ ಪಾಡಿ ಸಮಯವರಿತಾಗಾಗ-
ಳಿಂದುಧರಶರಣೆ ನಿಜಲಿಂಗಮಂ ಪೂಜಿಸುತ-
ಮಂದ ಮುದದಿಂದಲಷ್ಟಾವರಣ ಪೂರ್ತಿಗಾಗಡವಿಯುರು ಫಲಪುಷ್ಪವ ||
ಅಂದದಿಂ ಭುಂಜಿಸುತೆ ಗಿಡದಡಿಯೊಳುಂ ಮಲಗಿ-
ಚೆಂದದಿಂ ಗಿಡಬಳ್ಳಿಗಳನರಿದು ಪುಷ್ಪಮಕ-
ರಂದಕೆರಗುವ ಭ್ರಮರಗಳ ನೋಡಿಯಾಚಿಸಿದಳಿಂತು ವಚನವ ಪಾಡುತಾ ||೯||

ಅಳಿಕುಳವೆ ಮಾಮರವೆ ಮಿಸುಪ ಬೆಳೆದಿಂಗಳೆ
ನಲಿವ ಕೋಗಿಲೆಯೆ ನಿಮ್ಮೆಲ್ಲರನು ನಾನೊಂದ-
ನೊಲೆದು ಬೇಡುವೆ ನನ್ನಪತಿ ಚನ್ನಮಲ್ಲಿಕಾರ್ಜುನ ದೇವನಂ ತೋರಿಕೆ ॥
ಚಿಲಿಮಿಲಿಯೆನುತ್ತೋದುತಿಹ ಗಿಳಿಗಳೆ ನೀವು
ಸಲೆ ಕಾಣಿರೇ ನೀವು ಸಲೆಕಾಣಿರೇ ನೀವು
ನಲಿದು ಸರವೆತ್ತಿಪಾಡುತಿಹೆ ಕೋಗಿಲಿಗಳೇ ಸಲೆ . ನೀವು ಕಾಣಿರೀಗ ॥ ೧೦ ॥

ಎರಗಿ ಬಂದಾಡುತಿಹ ತುಂಬಿಗಳೆ ನೀವೆಲ್ಲ
ನೆರೆ ಕಾಣಿರೇ ನೀವು ನೆರೆ ಕಾಣಿರೇ ನೀವು
ಪಿರಿ ಕೊಳನ ತಡೆಯಲ್ಲಿ ನಲಿಯುತಿಹ ಹಂಸಗಳೆ ಸಲೆ ಕಾಣಿರೀಗ ನೀವು ॥
ಗಿರಿ ಗವ್ಹರಂಗಳೊಳು ನೆಲಸಿರುವ ನವಿಲುಗಳೆ
ನೆರೆ ನೀವು ಕಾಣಿರೇ ನೆರೆ ನೀವು ಕಾಣಿರೇ
ವರಚೆನ್ನಮಲ್ಲಿಕಾರ್ಜುನನೆಲ್ಲಿನೆಲಿಪ ನೆಂಬುದ ಪೇಳಿರರಿದಿರ್ದೊಡೆ ॥ ೧೧ ॥

ಜಾಲಮಂ ಬೀಸಿ ಮೀನವ ಪಿಡಿದ ಬೆಸ್ತರಂ
ಲೀಲೆಮಿಗೆ ಕಾಣುತ್ತೆ ಕಳವಳಿಸುತಾ ಶರಣೆ
ಜಾಲಗಾರನು ಬಿಡದೆ ಜಲದಲ್ಲಿ ಶೋಧಿಸುತೆ ಹಲವು ಮೀನಗಳ ಕೊಂದು ॥
ಓಲಾಡುವಂತೆ ತನ್ನಯ ಮನೆಯೊಳೊಂದು ಮಗು
ಕಾಲಮಿಗೆ ಸಾಯುತಿರ ಲೋಲಾಡನೇಕವನು
("ಸ್ವಾತ್ಮಾನಮಿತರಾಂಶ್ಚೈವ ದೃಷ್ಟ್ವಾವ ಲೋಕೇನಭಿದ್ಯತೇ ಸರ್ವಂಚಿಜ್ಜ್ಯೋತಿ ರೇವೇತಿ ಯಃಪಶ್ಯತಿ ಸ ಪಂಡಿತಃ)"
ಜಾಲಗಾರನ ದುಃಖ ಜಗಕೆಲ್ಲ ನಗೆಗೀಡು ಶ್ರೀ ಚೆನ್ನಮಲ್ಲಾರ್ಯನೆ ॥ ೧೨ ॥

ಭಕ್ತನಾಗಿರ್ದುಮೀಜೀವಹಿಂಸೆಯ ಮಾಳ್ಪ
ವ್ಯಕ್ತ ಮಾದಿಗರ ನಾನೇನೆಂಬೆನ್ನೆಯೆನುತೆ
ಸೂಕ್ತ ವಚನವ ಪಾಡಿ ಪ್ರಾಣಿವಧೆಯನು ಜರೆಯುತಂ ನಡೆದಳಾ ಶರಣೆಯು ॥
ಶಕ್ತಮಿದು ಸಂಸಾಂರ ಬೆಂಬಿಡದೆ ಕಾಡುತಿದೆ
ಶಕ್ತಿಯಿಂದೇದಿಗೀ ದಂದುಗಕ್ಕೇವೆನ್ನೈ
ವ್ಯಕ್ತಿಯೊಂ ಬೆಂದೊಡಲ ಹೊರೆಯಲಾರೆನು ಚೆನ್ನಮಲ್ಲಾರ್ಯ ಕೊಲ್ಲು ಕಾಯೈ ॥ ೧೩ ॥

ನಿಮ್ಮ ಧರ್ಮವೆನುತ್ತೆ ವಚನಮಂ ರಚಿಸುತ್ತ-
ಲುಮ್ಮಳಿಸುತಲ್ಲಲ್ಲಿ ಸುವಿಲಾಸಮಂ ಕಂಡು
ಹಮ್ಮಿನಿಂ ಬಿಟ್ಟೆನೆನೆ ಬಿಡುದು ಮಾಯೆಯಿದಯ್ಯ ಬಿಡದೆ ಬೆಂಬತ್ತಿರುವದು ॥
ನೆಮ್ಮಿ ಯೋಗಿಗೆ ಯೋಗಿಣಿಯದಾಯ್ತು ಮಾಯೆ ಮ-
ತ್ತೊಮ್ಮೆಗಂ ಸವಣಂಗೆ ಸವಣಿಯಾಯಿತು ಮಾಯೆ
ಬಿಮ್ಮನೊಳು ಯತಿಗಂ ಪರಾಕಿಯಾಯಿತು ಮಾಯೆಯೀ
ಮಾಯೆಗಾನಂಜೆನು ॥ ೧೪ ॥

ಭೋ ಚೆನ್ನಮಲ್ಲಿಕಾರ್ಜುನದೇವ ನಿಮ್ಮಾಣೆ ;
ನಾಚಿ ಭಾವದೊಳಿಂತು ವಚನಮಂ ರಚಿಸುತ್ತೆ
ಸೂಚಿಸಿ ಮಹಾತೃಷ್ಣೆ ಸಂಸಾರವೆಂದರಿಯೆ ಮತ್ತೆ ವಚನವ ಗೈದಳು ॥
ಯೋಚಿಸಲು ಸಂಸಾರವೆಂಬ ಹಗೆಯೈ ತಂದೆ
ನೀಚತನದಿಂದೆನ್ನ ವಂಶವಂಶವನರಸಿ
ಪೇಚಿನಿಂದೆನ್ನುವಸು ಪಿಡಿದು ಕೊಲುತಿದೆಯಯ್ಯ ನಿಮ್ಮ ಮೊರೆಹೊಕ್ಕೆ
ಕಾಯೈ ॥ ೧೫ ॥

ಬಿನ್ನಪವನವಧರಿಸು ಚೆನ್ನಮಲ್ಲಾರ್ಯನೆಂ-
ದೆನ್ನುತೊಂದೂರಿಗೈದುತೆ ಲಗ್ನಮಂಟಪವ
ನನ್ನಿಯಿಂ ಕಾಣುತ್ತೆ ಮತ್ತೆ ವಚನವ ರಚಿಸಿ ಸಾಮ್ಯಮೆನೆ ಪಾಡುತಿಹಳು ॥
ಎನ್ನ ಮಂಟಪಕೆ ಪಚ್ಚದುರೆ ನೆಲೆಗಟ್ಟು ಸಲೆ
ಚಿನ್ನದುರುತೋರಣವು ಬಜ್ಜರದ ಕಂಬಗಳು
ಸೂನ್ನತದ ಪವಳದುರೆ ಚಪ್ಪರವು ಮಾಣಿಕದ ಮೇಲ್ಗಟ್ಟನುಂ ಕಟ್ಟುತಾ ॥೧೬॥

ಮದುವೆಯಂ ಮಾಡಿದರು ನನಗೆ ನಮ್ಮವರೊಲಿದು
ಸದು ಕಂಕಣಂ ಕೈಯದಾರ ಸೇಸಿಯನಿಕ್ಕಿ
ಹೃದಯದಿಂ ಶ್ರೀ ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆ ನಲಿದಿತ್ತರು ॥
ಪದುಳದಿಂ ಹರನೆ ನೀನೆನಗಾಗಿ ಗಂಡನಾ-
ಗುದಿಸಬೇಕೆಂದಾನು ಸದನಂತಕಾಲಮೆನೆ
ಮುದದಿಂದೆ ತಪಿಸಿದ್ದೆ ಹಸಿಯಮೇಲಣ ಮಾತ ಬೆಸಗೊಳ್ಳಲೆಂದು ಬಿಡದೆ ॥೧೭॥

ಅಟ್ಟಿದರು ನಮ್ಮವರು ಶಶಿಧರನ ಹತ್ತಿರಕೆ
ನಿಟ್ಟಿಸುತಲೆಮ್ಮವರು ಭಸ್ಮವನೆ ಪೂಸಿದರು
ಕಟ್ಟಿ ಕಂಕಣವನ್ನು ಚೆನ್ನಮಲ್ಲಾರ್ಯ ನೀನೆನಗಾಗ ಬೇಕೆನ್ನುತಾ ॥
ನೆಟ್ಟನಾಶಿವಶರಣೆಯೊಂದು ಜೇಡರ ಹುಳವ
ಥಟ್ಟನೀಕ್ಷಿಸಿ ವಚನವಂ ರಚಿಸಿ ಪಾಡಿದಳು
ಕಟ್ಟಿತೆರಣೆಯಹುಳುವು ತನ್ನ ಸ್ನೇಹದಿ ಮನೆಯನುರೆ ತನ್ನ ನೂಲು
ತನಗೆ ॥ ೧೮ ॥

ಸಾಯಸವೆನಲ್ ಸುತ್ತಿ ಸಾವತೆರನಂತಿರಲು-
ಪಾಯವರಿಯದಲಾನು ಮನ ಬಂದುದಂ ಬಯಿಸಿ
ಸಾಯುತಿಹೆಸಿದ ಬಿಡಿಸಿ ನಿಮ್ಮತ್ತ ತೋರಯ್ಯ ಚೆನ್ನಮಲ್ಲೇಶ್ವರವಿಭೋ ॥
ಆಯಸವ ನೀಗುತ್ತೆ ನೋಡಿದುದನೆಲ್ಲವನು-
ಪಾಯದಿಂ ತಿಳಿಯುತ್ತೆ ಗುಣಗಳನು ಸ್ವೀಕರಿಸಿ
ಹೇಯಗೊಳಿಸುತೆ ದೋಷಗಳನಾಗ ಶರಣೆಯಾನಂದದಿಂ ನಡೆದಿರ್ದಳು ॥ ೧೯ ॥

ಈ ಶರಣೆಯಂ ನೋಡಿ ಕೆಲವರು ಹುಚ್ಚಳೆನುತ್ತ-
ಲೀ ಶರಣೆಯಂ ನೋಡಿ ಕೆಲವರು ಜ್ಞಾನಿಯೆನುತ್ತ-
ಲೀ ಶರಣೆಯಂ ನೋಡಿ ಕೆಲರು ಕಣ್ಮುಚ್ಚುತ್ತೆ ಕೆಲರು ವಂದಿಸುತಿರ್ದರು ॥
ಈ ಶರಣೆಯಂ ನೋಡಿ ಕೆಲರು ನಿಂದಿಸುತಿರುವ-
ರೀ ಶರಣೆಯಂ ನೋಡಿ ಕೆಲವರು ಬಣ್ಣಿಸುತಿರುವ-
ರೀ ಶರಣೆಯಂ ನೋಡಿ ಕೆಲರು ಪ್ರಶ್ನಿಸುತಿರುವರವರವರತೆರನಿರುವಳು ॥ ೨೦ ॥

ಇಂತು ನಲವಿಂದ ನಡೆದಿರುವ ತತ್ ಶಿವಶರಣೆ-
ಯಂತರಂಗವುಮುದಿಸಲೆಡದಕ್ಷಿ ವಿಸ್ಫುರಿಸ-
ಲಂತು ಕಂಗೊಳಿಸಿ ತಾ ಕಲ್ಯಾಣಪುರವರವು ಬಹುದಿನದ ಬಯಕೆಯಂತೆ ॥
ಕಾಂತೆ ಕಂಡಾಗ ಬಸವರಸನಂ ನೆನೆಯುತ್ತೆ
ಶಾಂತಿಯಿಂ ವಚನವಂ ಪಾಡಲಾದಳು ರಚಿಸಿ
ಸ್ವಾಂತದೊಳು ಕೈಂಕರ್ಯಮಂ ತಾಳಿ ಬೇಡಿದಳು ನಿಜಕರಣ ಸಂಶುದ್ಧಿಯ ॥ ೨೧ ॥

ಒಸೆದೆನ್ನ ಕಾಯದುರೆ ಕತ್ತಲೆಯ ಕಳೆಯಯ್ಯ
ಒಸೆದೆನ್ನ ಮಾಯೆಯುರೆ ಮದವನ್ನು ಮುರಿಯಯ್ಯ
ಒಸೆದೆನ್ನ ಜೀವದುರೆ ಜಂಜಡವ ಮಾಣಿಸೈಯೆನ್ನ ಶ್ರೀ ಬಸವತಂದೆ ||
ಅಸಮ ಶಿವ ಚೆನ್ನಮಲ್ಲೇಶ್ವರನೆ ಯನ್ನಸು-
ತ್ರಸೆವ ಮಾಯಾಪ್ರಪಂಚವನು ಬಿಡಿಸೈ ನಿಮ್ಮ
ಮಿಸುಪಧರ್ಮವೆನುತ್ತೆ ವಚನಮಂ ರಚಿಸುತ್ತೈದಿದಳು ಕಲ್ಯಾಣದೆಡೆಗೆ || ೨೨ ||

ಇತ್ತಲಾ ಸುಶಿವಾನುಭವದ ಮಂಟಪದಲ್ಲಿ
ಸತ್ಯಬಸವಾದಿ ಶಿವಶರಣರೊಡನಾ ಪ್ರಭುವು
ಚಿತ್ತದೊಳಗರಿದಂ ಮಹಾದೇವಿಯಾಗುಮನ ವಾರ್ತೆಯಂ ಜ್ಞಾನದಿಂದ ||
ಸತ್ತ್ವಮನು ಶರಣರೊಳಗಾಲೋಚಿಸುತ್ತಾಗ-
ಳುತ್ತಮ ಶಿವಾನುಭವಿಯಾದ ಕಿನ್ನರನೆಂಬು-
ದಾತ್ತಶರಣನನಟ್ಟಿದಂ ಕರೆಯಲಾಕ್ಷಣವೆ ಪ್ರಮಥರೊಪ್ಪಲು
ಮುದದೊಳು || ೨೩ ||

ಆಗಳಾನಂದದಿಂ ಕಿನ್ನರನು ಶಿವಶರಣ-
ಪೂಗದಪ್ಪಣೆಯೊಡೆದು ಲಿಂಗಮಂ ಧ್ಯಾನಿಸುತೆ
ರಾಗದಿಂ ಕಲ್ಯಾಣಪಟ್ಟಣದ ಹೊರಗೆ ಬರುತರಿದು ಮಾದೇವಿಯಿರವ ||
ಸಾಗಿ ನಡೆದಂ ತತ್ಸಮೀಪಕ್ಕೆ ವಚನದಿಂ
ದಾತ್ತದಾಗಳುಂ ಕಾಯದೊಳ್ ಕಳವಳಂ ಪೊಂದಿರ-
ಲ್ಕಾಗಳುಂ ಪ್ರಾಣದೊಳು ಮಾಯೆಯಿರಲೇತರ ಮನಂ ಸಲದು ನಿರ್ವಾಣವು ||೨೪||

ತ್ರಿಪುರಾಂತಕರ ಮಹ ಲಿಂಗಂ ಕುಸಂಸಾರಿ
ಕಪಟಯೆಂಬನು ನಿನಗೆ ಸುಜನೆಯಂದಾಗಳುಂ
ಕೃಪೆಮಾಡ ಕೇಳ್ ಮರುಳೆಯೆಂದೆನುತಲಂಗಮಂ ನಿರುಕಿಸಲು ಮಾದೇವಿಯು ||
ತಪದೆ ಲಿಂಗವಗೊಳಿಸಿ ಪೇಳಿದಳು ನಾನಂಗ-
ಕಪಟದುರು ಭಂಗವನು ಲಿಂಗಸುಖದಿಂ ಗೆಲಿದೆ
ಗುಸಿತಮನದುರೆ ಭಂಗಮಂ ಜ್ಞಾನದಿಂ ಗೆಲಿದೆಜೀವದುರು ಭಂಗವನು ನಾ ||೨೫||

ಕರಣದುರು ಕತ್ತಲೆಯ ಬೆಳಗನುಡುತಂ ಗೆಲೆದೆ
ನೆರೆದ ಜವ್ವನವಿಂಚಿನೊಳು ನಿಮ್ಮ ಕಣ್ಗೆಸೆವ
ನೆರೆ ಕಾಮನಂ ಸುಟ್ಟ ಭಸ್ಮಮಂ ನೋಡಯ್ಯ ವರಚೆನ್ನಮಲ್ಲಿನಾಥ ॥
ದುರುಳ ಕಾಮನ ಕೊಂದು ಮನಸಿಜನ ಮಾಡಿದೊಡೆ
ಸರಸದಿಂ ಮನಸಿಜನ ತಲೆಯ ಬರಹವ ತೊಡೆದೆ
ನರಿಯೆಂದು ಪೇಳುತ್ತೆ ಮತ್ತೊರೆದಳಾ ಮಹಾದೇವಿ ವೈರಾಗ್ಯಜೀವೆ ॥ ೨೬ ॥

ಎನ್ನಂತೆ ಪುಣ್ಯಗೈದವರುಂಟೆ ಜಗದಲ್ಲಿ
ಎನ್ನಂತೆ ಭಾಗ್ಯಗೈದವರುಂಟೆ ಜಗದಲ್ಲಿ
ಕಿನ್ನರನ ಸಮನಪ್ಪ ಸೋದರನು ನನಗದೇಳೇಳು ಜನ್ಮದೊಳು ಶಿವನ ॥
ಮನ್ನಣೆಯ ಭಕ್ತರೇ ಪರಮ ಬಂಧುಗಳೆನಗೆ
ಚೆನ್ನಮಲ್ಲೇಶನಂತಪ್ಪ ಪತಿಯೆನಗೆ ತಿಳಿ
ಮನ್ನಿಸುತಲಿಂತೆಂದು ಮಾದೇವಿ ನುತಿಸುತ್ತೆ ಕಲ್ಯಾಣದೊಳಪೊಕ್ಕಳು ॥ ೨೭ ॥

ಕಲ್ಯಾಣಮೆಂಬುದಿದನಾರು ಪೊಗಬಾರದೈ
ಸಲ್ಲದು ತದಾಶೆಯಾಮಿಷವಳಿದಗಲ್ಲದಲೆ
ಕಲ್ಯಾಣದತ್ತಲಡಿಯಿಡಬಾರದೊಳ ಹೊರಗು ಶುದ್ಧವಾದವಗಲ್ಲದೆ ॥
ಕಲ್ಯಾಣಮಂ ಪೊಗಲು ಬಾರದಾನೆಂಬುದುಂ
ಸೊಲ್ಲಾಸದಿಂ ಹರಿದು ಚೆಲ್ಲಿದವಗಲ್ಲದಲೆ
ಕಲ್ಯಾಣಮಂ ಪೊಗಲು ಬಾರದೊಳಗರಿದು ಶ್ರೀ ಚೆನ್ನಮಲ್ಲೇಶ್ವರನಿಗೆ ॥ ೨೮ ॥

ಒಲಿದು ಭಯಲಜ್ಜೆಯಂ ನೀಗಿ ಕಲ್ಯಾಣಮಂ
ಸಲೆ ಕಾಣುತಾಂ ನಮೋ ನಮಯೆನುತಲಿರ್ದಪೆನು
ನಲಿದಿಂತು ವಚನಮಂ ಪಾಡುತ್ತೆ ಕಲ್ಯಾಣದೊಳಪೊಕ್ಕು ಬಸವೇಶನ ॥
ಕಲೆಯ ಮಹಿಮೆಯ ಕಂಡು ವಚನಮಂ ಪಾಡಿದಳು
ತಿಳಿದೆನಯ್ಯಾ ನಿಮ್ಮ ಶರಣರುರೆ ಮೆಟ್ಟಿದೀ
ಯಿಳೆಪಾವನಂ ನಿಮ್ಮ ಶರಣರ್ಕಳಿಹ ಪುರವೆ ಕೈಲಾಸಪುರವಿರ್ಪುದು ॥ ೨೯ ॥

ಅಯ್ಯ ನಿಮ್ಮಯ ಶರಣರಿರ್ದುದೇ ನಿಜವಾಸ-
ವಯ್ಯ ಭೋ ಚೆನ್ನಮಲ್ಲಾರ್ಯ ನಿಮ್ಮಯ ಶರಣ
ಮಯ್ಯ ಬಸವಣ್ಣನಿಹ ಕ್ಷೇತ್ರವುವಿಮುಕ್ತ ಸುಕ್ಷೇತ್ರವಾಗಿರಲು ನಾನು ||
ಅಯ್ಯ ಬಸವೇಶನಡಿಗುರೆ ನಮೋನಮಯೆನುತ-
ಅಯ್ಯ ನಾ ಬದುಕಿರ್ದೆನೆಂದು ವಚನವ ಪಾಡು-
ತೊಯ್ಯನೊಯ್ಯನೆ ಕಿನ್ನರಯ್ಯನೊಡನಾಗ ಬಸವಾಲಯಕ್ಕೈದಿರ್ದಳು || ೩೦ ||

ಅಂತು ಸಂಧಿ ೭ ಕ್ಕಂ ಪದಗಳು ೪೧೩ ಕ್ಕಂ ಮಂಗಳಂ

|| ಶ್ರೀಗುರು ಸಿದ್ಧಲಿಂಗಾಯ ನಮಃ ||

# ಶ್ರೀ ಅಕ್ಕಮಹಾದೇವೀ ಪುರಾಣಂ

## ೮ ನೇ ಸಂಧಿ ಪ್ರಾರಂಭ

**ಸೂಚನೆ—** ಆಮಹಾದೇವಿಯಕ್ಕನು ಬಸವಮಂದಿರದೆ
ಪ್ರೇಮದಿಂ ಪರಶಿವಾನುಭಮ ಮಂಟಪದಲ್ಲಿ
ರಾಮಣೀಯಕ ಮಾದ ಶರಣ ಸಂವಾದದೊಳು ಸುಖದೊಳಿರ್ದಳು ಶರಣೆಯು ||

**ಸ್ತೋತ್ರ—** ಬಸವೇಶ್ವರಂ ಶೂನ್ಯಸಿಂಹಾಸನವ ರಚಿಸು-
ತಸಮಾಲ್ಲಮನ ಜಾನಿಸುತ್ತಿರಲು ಪ್ರಭುವರನು
ಸಸಿನದಿಂ ತದ್ಭಕ್ತಿಯಂ ಪರಕಿಸಲ್ಕವನು ಬಸವನರಮನೆ ಗೈದಿರೆ ||
ಒಸೆದು ತತ್ಪಾದಾರ್ಚನೆಯೊಳು ತತ್ಪರನಾಗು-
ತೆಸೆದು ಮರದಿರಲುಳಿದ ಗಣವೃಂದಮುರುಕೋಪ-
ವಶವಾಗಿರಲು ಲೀಲೆಯಿಂ ಸರ್ವರಿಗೂ ಬುದ್ಧಿಗಲಿಸಿದಲ್ಲಮನನುತಿಪೆ ||೧||

ಆ ಮಹಾದೇವಿಯುರು ಕಿನ್ನರನ ಬೆರೆಸುತಂ
ಪ್ರೇಮದಿಂ ಬರುಬರುತೆ ಬಸವರಾಜನ ಕಂಡು
ರೋಮದುದ್ಗಮವಾಗೆ ಭಕ್ತಿಭಾವದೆ ನಮಿಸಿ ನುತಿಸಲಾದಳು ವಚನದೆ ||
ನೇಮದಿಂದರಿಸಿ ತೊಳಲಿದರಿಲ್ಲ ಬಯಸಿ ಪುಗ-
ಲೀಮನಕೆ ತಪವಮಾಡಿದರಿಲ್ಲ-
ವಾಮಹಾ ಸುಕೃತದಿಂದದು ತಾನು ಬಹುಕಾಲಕಲ್ಲದಲೆ ಸಾಧ್ಯ ವಹುದೆ || ೨ ||

ಶಿವನು ತಾನೊಲೆಯದಲೆ ಕೈಗೂಡದಿದುಮೆಂದು
ಭವಹಾರಿಯಹ ಚೆನ್ನಮಲ್ಲಿಕಾರ್ಜುನನೆನಗೆ-
ಯವಿರತಂ ತಾನೊಲಿದನಾಗಿನಾ ಬಸವಣ್ಣನಂಘ್ರಿಯಂಕಂಡು ಬಾಳ್ವೆ ||
ತವೆನಿಮ್ಮ ಸಜ್ಜನ ಸದಾಚಾರಮಂ ಕಂಡು
ಕವಿದೆನ್ನ ಕಣ್ಣಳುರೆ ಪಟಲಮುಂ ಹರಿಯಿತ್ತು
ಶಿವನಪ್ಪ ನಿಮ್ಮಸಜ್ಜನರಸದ್ಭಾವರಡಿಗೆರಗಿ ಲಿಖಿತವುತೊಡಿಯಿತು || ೩ ||

ವರಚೆನ್ನಮಲ್ಲಿಕಾರ್ಜುನ ನಿಮ್ಮ ಶರಣನಹ
ಪರಮ ಸಂಗನಬಸವರಾಜನಂಘ್ರಿಯಕಾಣು-
ತುರೆಯುರೆ ನಮೋ ನಮೋ ಎನುತಿರ್ದೆನೆಂದು ವಚನವಗ್ಯೆದು ಸುತಿಸುತಿಹಳು ||
ಗುರುಕಾಯಲಜ್ಜದಾ ಕಲ್ಪಿತವ ಕಳೆದು ಮು-
ತ್ತುರಿಜೀವಲಜ್ಜೆಯಾ ಮೋಹಮಂ ಕಳೆದು ಮು
ತ್ತುರುಮನದ ಲಜ್ಜಯಾ ನೆನಹ ಸುಡುತಂ ಭಾವದುರೆಕೂಟವದುಬತ್ತಲೆ ||೪||

ಅರಿದಿಂತು ತವಕದಾ ಕೆಳೆತನದ ವ್ಯವಹೃತಿಗೆ
ನೆರೆಪೋಗದಯ್ಯ ಕೂಡಲಸಂಗ ನಿಮ್ಮವರ-
ಶರಣೆಯಿವಳೆನಗೆ ಸಲೆ ಹೆತ್ತತಾಯಹಳು ಮಹಾದೇವಿಯಕ್ಕನ ನಿಲವನು ||
ಅರಿಯಯ್ಯ ಪ್ರಭುವೆ ರೂಹಿಲ್ಲದಂಗೊಲೆದ ಶಿವ-
ಶರಣಂಗೆ ತನುವಿನ ಹಂಗುಂಟೆ ಮನವಿರದ-
ವರಿಗೆ ಮೆಚ್ಚಿದವಂಗೆ ಮಾನ ಹಂಗುಂಟೆ ಚಿರ ದಿಗಂಬರಿಗೊಲಿದಗೆ || ೫ ||

ಅರುಬೆಯಾಹಂಗುಂಟೆ ಪರಮು ಕೂಡಲಸಂಗ-
ನುರುಶರಣೆಮಾದೇವಿಗಾವಾವ ಹೊರೆಯಿಲ್ಲ
ನಿರುಕಿಸೆನಲುದಮದದ ಜೌವನವನೊಳಕೊಂಡಸತಿ ನೀನುವಿತ್ತಲೇಕೆ ||
ಇರೆಬಂದೆಯಾ ಸತಿಯನಲ್ ಮುನಿವರೆಮ್ಮ ಶರ-
ಣರು ನಿನ್ನ ಪತಿಯ ಕುರುಹಂ ನೀನು ಹೇಳಬ-
ಲ್ಲರೆಯಿತ್ತ ಭಂದು ಕುಳ್ಳಿರುವದೊಲ್ಲದಿರೆ ತೊಲಗೌ ತಾಯೆ ನೀಸೀಗಳೆ || ೬ ||

ಎಮ್ಮಯ ಗುಹೇಶ್ವರನ ಶರಣ ಸನ್ನಿಹಿತಮುಂ
ನೆಮ್ಮಿ ಐಯ್ದಡೆ ನಿನ್ನ ಪತಿಯದಾರೆಂಬುದನು
ಸಮ್ಮತದೆ ಪೇಳೀಗಲೆಯುವ್ವನೆಂದನಾ ಅಲ್ಲಮು ಪ್ರಭುರಾಯನು ||
ನೆಮ್ಮುಗೆಯ ಗುರುವೆ ತೆತ್ತಿಗನಾದ ಲಿಂಗವೇ
ನಮ್ಮ ಮದುವಣಿಗನೈಯಾನು ಮದುವಣಿಗಳೈ-
ಯೊಮ್ಮನದೊಳರಿಯಲ್ಕೆ ಶರಣರೇ ತಾಯ್ತಂದೆಗಳು ತಿಳಿದುಕೊಟ್ಟರೆನ್ನ || ೭ ||

ಸರಸದಿಂ ಪ್ರಭುವರನ ಮನೆಗೆ ಸಮನೆನಿಪ ಸ.
ದ್ವರನನರಿದಿದುಕಾರಣಂ ಚೆನ್ನಮಲ್ಲಾರ್ಯ-
ನರಿಯಲೆನಗುರುಪತಿಯು ಲೋಕದೀ ಗಂಡರೆನಗೇನು ಸಂಬಂಧವಯ್ಯ ||
ನೆರೆತಪ್ಪಹೊರಿಸಿ ನೀ ಹೊರಟೆನೆಂಬದು ನಿಜವು
ತೊರೆದು ತನುವಿನ ಸಿರಿಯ ನಿರ್ವಾಣವಾದಲ್ಲಿ
ಯುರು ಮನದ ಭ್ರಾಂತಿಯಿದು ನಿಶ್ಚಿತವದಾಗದೌ ಕೇಶವೆಂಬುವ ಶೀರೆಯು ||೮||

ಅಂಗಕ್ಕೆ ಮರೆಯಾಯಿತಪಮಾನವೆಂತು ತಾಂ
ಭಂಗವಾಯಿತು ಕೇಳದೆ ಗುಹೇಶ್ವರ ಮಹಾ-
ಲಿಂಗಕ್ಕೆ ವೇಷವಿದು ಸಲ್ಲದೌ ಎಂದೆನಲ್ ನುಡಿದಳಾ ಮಾದೇವಿಯು ||
ಅಂಗವಿದು ಕರ್ರನೇಕಂದಿದಡುಮೇನಯ್ಯಾ
ಅಂಗವಿದು ಮಿರ್ರನೇಮಿಂಚಿದೊಡಮೇನಯ್ಯ
ಪಿಂಗದಂತಃಕರಣ ಶುದ್ಧವಾದಬಳಿಕ್ಕೆ ಚೆನ್ನಮಲ್ಲಾರ್ಯನೊಲಿದ || ೯ ||

ಕಾಯವಿದುವೆಂತಿದ್ದರೇನಯ್ಯ ಪ್ರಭುವರನೆ
ತಾಯೆ ಕೇಳ್ ದೇವನೊಲಿಯದಿರಲೊಲಿಸಿರಿವೆಯಂ-
ಬಾಯಸವಿದಾವುದಕ್ಕೌ ಭಾವಶುದ್ಧವಾದಲ್ಲಿ ಶೀರೆಯನಳಿಯುತಾ ||
ಹೇಯವಿದು ಕೂದಲವ ಮರೆಗೈದುದೇತಕ್ಕ-
ದೀಯುಪಾಯವದಂತರಂಗಲಜ್ಜೆಯುಹೊರಗೆ
ನ್ಯಾಯ ಮೆನೆ ತೋರಿತ್ತದೀಗುಹೇಶ್ವರಲಿಂಗಕೊಲವರವಿದಿಲ್ಲ ತಿಳಿಯಾ || ೧೦ ||

ಫಲಪಕ್ವವಾಗದಲೆ ಸಿಪ್ಪೆಯೊಪ್ಪಂಗೆಡದು
ಸಲೆ ಕಾಮ ಮುದ್ರೆಯನು ಕಂಡು ನಿಮ್ಮೆಲ್ಲರಿಗೆ
ಬಲು ನೋವು ಮಹುದೆನುತೆ ಮುಚ್ಚಿದೆನು ಕಾಡದಿರು ಚೆನ್ನಮಲ್ಲಾರ್ಜುನವಳ ||
ತಿಳಿ ಪರವು ನಿನ್ನೊಳಗೋ ನೀಪರಮನೊಳಗೆಂಬ
ನೆಲೆಯರಿಯೆ ಪೇಳ್ ಸಿಪ್ಪೆಯೊಪ್ಪಗೆಡೆ ತಿಳಿ ರಸವು
ಕೊಳಕಹುದದುಂ ಗುಹೇಶ್ವರ ಲಿಂಗಕೊಪ್ಪದಿಹ ಮಾತು ತಿಳಿಯೌವ್ವನೀನು ||೧೧||

ಗುಣದೋಷ ಸಂಪಾದನೆಯ ಮಾಡುವನ್ನಕ್ಕ
ಘನ ಕಾಮದೊಡಲು ಕ್ರೋಧದಗೊತ್ತು ಲೋಭದಿ-
ಕ್ಕೆನೆರೆ ಮೋಹದ ಮಂದಿರಂ ತದಘಭಾವಮರತಲ್ಲದಲೆ ಚೆನ್ನಮಲ್ಲ ||
ಇನಿತರಿಯಲಿಂಬಿಲ್ಲವೆನಲಣ್ಣಗಳೆ ಕೇಳಿ
ರೆನೆ ಕಾಮದಿಂ ಕಂಡವಾಕ್ರೋಧದಿಂದಸ್ಥಿ
ಜನಿಪಲೋಭದೆ ಸಕಲ ವಿಷಯಂಗಳಾ ಮೋಹದಿಂ ನೋಡಲದು ಕಾಮನ ||೧೨||

ಘನತರದ ಬಲೆಯೊಳಗೆ ಕಾಮನಂ ಗೆಲುವರಾ-
ವನಘೆ ಪೇಳಾವುದಾ ತದ್ಗುಹೇಶ್ವರಲಿಂಗ-
ಕೆನಲೊರೆದಳಾ ಮಹಾದೇವಿ ಮತ್ತೊಂದು ವಚನವರಚಿಸುತಾ ಪ್ರಭುವಿಗೆ ||
ಅನುಪಮನೆ ಕೆಂಡದಾ ಶ್ರವದಂತೆ ಸೂತ್ರ ಬಂ-
ಧನವ ಗೆಲಿದಾ ಬೊಂಬೆಯಂತೆ ಜಲವರತತದ್
ಘನತರ ತಟಾಕದಂತಿರೆ ಬೆಂದನುಲಿಯಂತೆ ಮತ್ತೆ ಪಿಂತಣಹಂಗದು || ೧೩ ||

ಎನಗುಂಟಿ ಚೆನ್ನಮಲ್ಲಾರ್ಯನಂಗವೆ ಸದಾ-
ಘನ ಸಮಾಶ್ರಯವಾಗಿ ಮೆರೆವವಳಿಗೇಂ ಪ್ರಭುವೆ-
ಯನವರತ ಸಾವಿರದ ಕೇಡಿರದ ರೂಹಿರದ ಕುರುಹಿರದ ಚಲುವಂಗೆ ನಾ ||
ಎನಿತುಮೆಡೆಯಿರದ ಕಡೆಯಿರದ ಕುಲಸೀಮೆಯಿರ-
ದನಿತು ಭವವಿರದ ಭಯವಿರದ ನಿರ್ಭಯದ ಚಲು-
ವನಿಗೆ ನಾನೊಲಿದೆನೈ ಚೆನ್ನಮಲ್ಲಾರ್ಯನೇ ಗಂಡನೆನಗೀಲೋಕದ || ೧೪ ||

ಮಿಕ್ಕಿರುವ ಗಂಡರೆನಗೇನು ಸಂಬಂಧವೈ-
ಯಕ್ಕಕೇಳ್ ರೂಹಿಂಗೆ ಕೇಡುಂಟರೂಪಕ್ಕೆ
ಮಿಕ್ಕಿದದು ಕೇಡಿಲ್ಲ ರೂಪನಿರೂಪಗಳ ನೋಡಿಬೆರೆಯುವದನೊರೆಯಾ ||
ತಕ್ಕ ಸಂಬಂಧವಿದಸಂಬಂಧವಾಗಿಹುದು
ಸಿಕ್ಕಿರಲು ದೇಹೇಂದ್ರಿಯದ ಜಾತಿಸೂತಕದೆ
ಮಿಕ್ಕಿ ಗುಹೇಶ್ವರನ ಮುಟ್ಟಬಾರದು ಕೇಳು ತಾಯೆಯೆನೆ ನುಡಿದಳಾಕೆ ||೧೫||

ಹಾವಿನುರೆ ಹಲ್ಲ ಕಳೆಯುತ ಹಾವನಾಡಿಸಲು
ಹಾವಿನುರುಸಂಗವೇ ಕರಲೇಸು ಕಂಡಯ್ಯ
ಓವಿ ಕಾಯದ ಸಂಗಮಂ ವಿವರಿಸಲು ಬಲ್ಲಡಾಕಾಯಮೊಳಿತು ತಿಳಿಯೌ ||
ದೇವ ಕೇಳ್ ತಾಯಿ ರಕ್ಕಸಿಯಾದತೆರನಂತೆ
ತೀವಿದಂಗವಿಕಾರ ಚೆನ್ನಮಲ್ಲೇಶ್ವರನೆ
ನೀನೊಲಿದವರ್ ಕಾಯಗೊಂಡಿದ್ದರೆನಬೇಡವೈ ಪ್ರಭುವೆ ಸತ್ಯವಿಭುವೆ || ೧೬ ||

ತನಗುಣವ ವಿವರಿಸಲು ಮನಶುದ್ಧವಿರಬೇಕು
ಮನದಗುಣ ವಿವರಣಕೆ ಕರಣಶುದ್ಧತೆ ಬೇಕು
ತನುಮನವದಿಂದ್ರಿಯವು ಶುದ್ಧಸುವಿಧಾನವಾಗುತೆ ಲಿಂಗಮುಖವೇದ್ಯವು ||
ಎನಿಸದಿರ್ದಡೆ ಗುಹೇಶ್ವರಲಿಂಗಮಂ ಬೆಸಸ-
ಲನವರತವಾಗದದು ಕೇಳು ತಾಯೆಯೆನಲ್ಕೆ
ಘನ ಶರಣೆಹ ಮಹಾದೇವಿಕ್ಕನು ಪ್ರಭುವಿಗುತ್ತರವನಿತ್ತಳಿಂತು || ೧೭ ||

ತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದಂ
ದಿನದಿನದೆ ಕೊಂಡೆನ್ನ ಮನಶುದ್ಧಿವಾಯಿತ್ತು-
ನೆನೆದಸಂಖ್ಯಾತರಂ ಕರಣಶುದ್ಧತೆಯಹುದು ಸಕಲ ಶರಣರ ನೋಡುತಾ ||
ವಿನುತ ಕೀರ್ತಿ ಯಕೇಳಿ ಶ್ರೋತ್ರಶುದ್ಧವೆನಿಕ್ಕು
ಮಿನಿತೆನ್ನ ಭಾವನೆಯುಮೆನ್ನಜೀವನವು ಕೇಳ್
ಘನ ಚೆನ್ನಮಲ್ಲಾರ್ಯನೇಟ್ಟನೆ ನಿಮ್ಮ ಪೂಜಿಸುತೆ ಭವಗೆಟ್ಟೆನ್ನೆ ||೧೮||

ಬಸವನಂಘ್ರಿಯ ಕಂಡು ತನು ನಾಸ್ತಿಯಾಯಿತ್ತ-
ದೆಸೆದಿರುವ ಚೆನ್ನಬಸವಣ್ಣನಂ ಕಾಣುತ್ತ-
ಲಸುವು ಬಯಲಾಯಿತ್ತು ಪ್ರಭುದೇವ ನಿಮ್ಮ ಶ್ರೀಪಾದಕ್ಕೆಶರಣೆನ್ನುತಾ |
ಒಸೆದರಿವು ಸ್ವಯವಹುದು ಚೆನ್ನಮಲ್ಲೇಶ್ವರ
ಎಸೆವ ನಿಮ್ಮಯ ಶರಣರಾಕರುಣೆಯಂ ಪಡೆದು
ಮಿಸುಪೆನಗೆ ಮತ್ತಾವುದಿಲ್ಲವೈ ಪ್ರಭುವೆ ಚಿದ್ವಿಭುವೆ ಸ್ವಭುವೆ ಶಂಭುವೆ ||೧೯||

ಕಾಯಶುದ್ಧಾಗದಲೆ ಲಿಂಗಮುಂ ನೆಲೆಗೊಳದು
ತಾಯೆಯೀಜೀವವದು ಶುದ್ಧವಾಗದಿರಲ್ಕೆ ಲಿಂ-
ಗಾಯತವದಾಗದೌ ಭಾವಮುರೆ ಶುದ್ಧವಾಯಿತ್ತೆಂದಡುಂ ನೆಲಸದು |
ಆಯುಶವದೇಕಾ ಗುಹೇಶ್ವರನ ಲಿಂಗದೊಳು
ನ್ಯಾಯ ಶುದ್ಧವಿಧಾನಿಯಾದೆನೆಂದರೆ ನಿಜವು
ಧ್ಯೇಯವಾಗದು ತಾಯೆಕೇಳೆಂದು ಪ್ರಭುವೆನಲು ನುಡಿದಳಾಮಾದೇವಿಯ ||೨೦||

ಕಾಯದೊಳಗಮಕಾಯವಾಯಿತ್ತು ಜೀವದೊಳು
ನ್ಯಾಯಮೆನೆ ನಿರ್ಜೀವವಾಯಿತ್ತು ಭಾವದೊಳು
ನ್ಯಾಯಮೆನೆ ನಿರ್ಭಾವವಾಯಿತ್ತು ನನ್ನ ಮನದೊಳು ಘನಕೆ ನೆನಹಾಯಿತು- |
ಜೀಯ ನೀವೆನ್ನ ತಲೆಮೊಲೆಗಳಂ ನೋಡುತ್ತ-
ಪಾಯದೊಳು ಸಲ ಹಿದಿರಿ ಚೆನ್ನಮಲ್ಲೇಶ್ವರನ
ಧ್ಯೇಯ ಧರ್ಮಿಣಿಯನ್ನು ಪ್ರಭುವೆ ನೀ ನೀಕ್ಷಿಸುತೆಕರುಣೆಯಂ ಗೈಯ್ಯಲೊಡನೆ||೨೧

ಕೂಡಲಿಲ್ಲದ ಘನವ ಕೂಡುತಿಹಪರಿಯೆಂತು
ನೋಡದಲೆ ಹೇಳಿದೊಡನದಕದೇ ಕೊರತೆಯಿದೆ
ಕೂಡಿದ ಗುಹೇಶ್ವರನ ಲಿಂಗಮಂ ಬೇರ್ಪಡಿಸಿ ಬೇರೆಸಿಪ ಪರಿಯಂ ತೋರಿ ||
ನಾಡೆ ಪೆತ್ತಾಘೃತಕೆ ಕರಗಿಡುವ ತುಪ್ಪಕ್ಕೆ
ನೋಡಿಪೇಳ್ವಭೇದವೇನಿಹುದು ಪ್ರಭುವರನೆ
ಕೂಡೆಸವ ದೀಪಕ್ಕೆ ದೀಪ್ತಿಗೇಂ ಭೇದವಿದೆಯಾತ್ಮಕಂಗಕ್ಕೆ ಪೆರತೇಂ ||೩೨||

ಮುಟ್ಟಿಗುರುವೆನ್ನಂಗಮಂ ಮಂತ್ರಮಂ ಮಾಡಿ
ತಟ್ಟನೇ ತೋರಲ್ಕೆ ದೇಹನಿರ್ದೇಹಕ್ಕ-
ಮಿಟ್ಟಭಿನ್ನತೆಯಿಲ್ಲ ಚೆನ್ನಮಲ್ಲೇಶ್ವರನವೆರಸಿ ಮತಿಗೆಟ್ಟವಳನು ||
ನಿಟ್ಟಿಸದಲೇತಕ್ಕೆ ನುಡಿಸುವಿರಿ ಪ್ರಭುದೇವ
ಪುಟ್ಟಿದಂಗವ ಲಿಂಗಮುಖದಿಂದಲರ್ಪಿಸುತೆ
ದಿಟ್ಟಿಸಲ್ಕೀಯಂಗವಹುದನಂಗಂ ತಿಳಿಯೆ ಮನವನರಿವಿಂಗರ್ಪಿಸಿ || ೩೩ ||

ಮನದಲಯವಾಯಿತ್ತು ಭಾಮಮಂ ತೃಪ್ತಿಗರಿ-
ದಿನಿತನರ್ಪಿಸಿ ಭಾವವಿರದೆ ಬಯಲಾಯಿತ್ತು
ಘನತೆಯುಳ್ಳಂಗ ಮನವಾ ಭಾವವಳಿದ ಕಾರಣದೆ ಕಾಯಮಕಾಯವು ||
ಎನಿಸುಹುದದೆನ್ನ ತತ್ಕಾಯ ಸುಖಭೋಗವನು
ಘನಲಿಂಗವೇ ಭೋಗಿಸುವದಾಗಿ ಶರಣಸತಿ-
ಯನುಪಮಿತ ಲಿಂಗಪತಿಯಾದೆನಿದುಕಾರಣಂ ವರಚೆನ್ನಮಲ್ಲಾರ್ಯನೆ ||೩೪||

ಗಂಡನೊಳಹೊಕ್ಕು ಸಲೆಬೆರಿಸಿದೆನು ಕೇಳಯ್ಯ
ಕಂಡು ನಾ ಸತ್ತೆನೆನುತಂ ಪೆಣವುಕೂಗುವುದೆ
ಕೊಂಡುಬಯುಚಿಟ್ಟ ಬಯಕೆಯದು ಕರೆದಿಹುದೆ ಹೆಪ್ಪಿಟ್ಟಪಾಲ್ ಸಿಹಿಯಪ್ಪುದೆ ||
ಖಂಡಿತವಿದೀ ಮಾತನೊಪ್ಪುವದೆ ಲೋಕದೊಳ-
ಖಂಡಿತ ಗುಹೇಶ್ವರನ ಲಿಂಗಕ್ಕೆ ತಿಳಿಯೆನಲು
ಖಂಡಿಸುತೆ ಉತ್ತರವ ಪೇಳಿದಳು ತನ್ಮಹಾದೇವಿಯಕ್ಕನು ಪ್ರಭುವಿಗೆ || ೩೫ ||

ಸತ್ತಹೆಣವೈದೆ ಕೂಗಿದುದುಂ ಕೇಳಯ್ಯ
ಬಿತ್ತರದೆ ಬಯಚಿಟ್ಟೆ ಬಯಕೆಕೆಕರೆದಿಹುದಂಟು
ಮತ್ತೆ ಹೆಪ್ಪಿಟ್ಟಪಾಲಂ ಗಟ್ಟಿಗೊಳ್ಳುತ್ತೆ ಸಿಹಿಯಾದುದುಂಟು ತಿಳಿಯೈ ||
ಸತ್ಯವಿದು ನಿಶ್ಚಯಿಸಿ ನೋಡುತಂ ಚೆನ್ನಮ-
ಲ್ಲೋತ್ತಮನೊಳುಂಟು ಪೇಳೆನಗಿದಾಶ್ಚರ್ಯ ಮಾ-
ವ್ಯಕ್ತಮೆನೆ ಕಾಯವಿಲ್ಲದ ಸುಖವ ಜೀವವಿಲ್ಲದ ಭಾವವಾತಾವನು || ೨೬ ||

ಒರೆಯುವ್ವ ನೀಗುಹೇಶ್ವರಲಿಂಗಕೆಂದೆನಲು
ಮರೆದೊರಗಿ ಕನಸುಕಂಡೊರೆವಲ್ಲಿ ಸತ್ತಹೆಣ-
ವಿರದೆಲೆರ್ದಿತ್ತು ತನ್ನಯಖುಣ ನಿಧಾನಮುಂ ತಾನೇಳ್ದುಕರೆಯಿತ್ತರಿ ||
ಅರಿದು ಹೆಪ್ಪಿಟ್ಟಪಾಲ್ ಹೆತ್ತುಪ್ಪವಾಗುತ್ತೆ
ಬೆರೆದು ಸಿಹಿಯಾಯಿತ್ತದಕ್ಕೆ ನೆರೆತಪ್ಪನರಿ-
ದಿರಲು ಸಾಧಿಸಲೇಕೆ ವರಚೆನ್ನಮಲ್ಲಿಕಾರ್ಜುನದೇವದೇವನಲ್ಲಿ || ೨೭ ||

ಇದುವೇಲೇಸಾಯಿತ್ತು ತುಂಬಿರುವ ಲೆಕ್ಕಕ್ಕೆ
ಪದಳ್ದು ಮತ್ತೊಂದೆಂದು ಕಡೆಗಾಣಿಸುವ ತೆರದಿ
ಪದುಳಮೆನೆ ಸ್ಥಾಣುವಿನ ಮರೆಯಂತೆ ಸಾಗರದಕೊಂಬಿನಂತಿರ್ದುಮೆಸವ ||
ಸದುವಿಹಗನಂತೆ ತಾನೆಲ್ಲಿಬಂದಡುಪರಮ-
ಮದನಹರ ಗುಹೇಶ್ವರನೆಂಬ ಸದ್ಭಾವವೊಂ-
ದದುವೆಯೆಂದೆನಲು ಮಾದೇವಿ ನುಡಿದಳ್ ಮಹಾಪ್ರಭುವಿಗಂ ಕೈಮುಗಿಯುತಾ ||೨೮

ಎನಗೇಕೆ ನಾ ಪ್ರಪಂಚದ ಪುಥ್ಥಳಿಯು ಕೇಳು
ಘನಮಾಯ ಮಲಭಾಂಡಮಾತುರದ ಭವಸಿಳಯ-
ಮನಘಮೆಲನತಿಶಯವು ಜಲಕುಂಭದಡೆಯಾಳು ನೆಲೆಮನೆಯದೇ ಕೈಪ್ರಭೋ ||
ಇಸಿಯ ಕೇಳ್ ಬೆರಳುನೆರೆತಾಳಪಣ್ಪಿಸುಕಿದೊಡ-
ಮಿನಿದೆಂದುಮೆಲುಲುಂಟೆ ಬಿತ್ತಲ್ಲಿ ಜೀವಮದ-
ರಫಿತೊಪ್ಪದಂತೆನ್ನ ತಪ್ಪನೀಗೊಪ್ಪುಗೊಳ್ಳೈ ಚೆನ್ನಮಲ್ಲಿನಾಥ || ೨೯ ||

ನೀವೆಯೆನ್ನಣ್ಣಂದಿರೆಂದು ಮಾದೇವಿನು-
ತ್ತೋವಿ ಚಂದನವ ನೆರೆ ಕಡಿದು ತೆಯ್ದೊಡೆ ನೊಂದೆ-
ನೇವೆನೆನ್ನುತೆ ಕಂಪ ಬಿಟ್ಟತ್ತೆ ಕನಕವನು ತಂದು ಕರಗಿಸೆ ಬೇಯುತಾ ॥
ಸೌವರ್ಣಮದು ಕಲಂಕವನು ಪಿಡಿದಿತ್ತೇನು
ದೇವ ಕೇಳ್ ಸಂದುಸಂದಂ ಕಡೆಧು ಕಬ್ಬ ತಂ-
ದೋವದಲೆ ಗಾಣದೊಳಗಿಕ್ಕಿ ಪಾಕಂ ಮಾಡಲಾ ಕಬ್ಬು ನೊಂದೆನೆಂದು ॥೩೦॥

ಸವಿಯ ಬಿಟ್ಟತ್ತೆ ನಾನೆಸಗಿರುವ ಹೀನವೆ-
ಲ್ಲವ ತಂದು ಮುಂದಿಳುಹಲೇಂ ನಿಮಗೆ ಹಾನಿಯೇ
ಶಿವದೇವ ವರ ಚೆನ್ನಮಲ್ಲೇಶಕೊಂದಡಾಂ ಶರಣೆಂಬುದಂ ಮಾಣೆನು ॥
ಅಂಗನೆ ಸದಂಗನೆಯ ರೂಪವಲ್ಲದೆ ಮತ್ತೆ
ಪಿಂಗದಲೆ ಮನವಸ್ತುಭಾವದೋಳ್ ಬೆಚ್ಚಂತೆ
ಭಂಗಿಸಲಿಹುದು ನೀಂ ಬಂದ ಕಥನದೆ ಬಂದು ಪಿಂಗಿರುವೆಯಲ್ಲ ಅಕ್ಕ ॥೩೧॥

ವರಗುಹೇಶ್ವರಲಿಂಗದೊಳುಭಯಂ ನಾಸ್ತಿ ಮನ-
ಮುರೆನಾಶವಾಯಿತೌಯೆಂದು ಪ್ರಭು ವರ್ಣಿಸಲು
ನೆರೆದಂಗ ಸಂಗದೊಳು ಲಿಂಗಸಂಗಿಯಾದೆನು ಲಿಂಗಸಂಗವೊಳು ನಾ ॥
ಚಿರಮಂಗಲಿಂಗಿಯಾಗಿಹೆನುಭಯಸಂಗವ-
ನ್ನರಿಯದಲೆ ಪರಿಣಾಮಿಯಾದೆನ್ನೆ ನುಡಿಗಡಣ-
ವಿರೆಮರೆದು ತೆರೆಯಿಲ್ಲದಿರ್ದೊಡೇಂ ಚೆನ್ನಮಲ್ಲಾರ್ಯನೊಳ್ ಬೆರೆಸಿ ಬಳಿಕ ॥೩೨॥

ಎನ್ನನಾನೇನೆಂದು ತಿಳಿಬೆನೆಂದೊರೆಯೆನ್ನ
ನಿನ್ನಂಗದೊಳು ಲಿಂಗಸಂಗಮಂ ಲಿಂಗದೊಳು
ನಿನ್ನಂಗಸಂಗಮಂ ಮಾಡಿರುವನೆಂದೊಪಂ ಸಂದಭೇದವನರಿಯದ ॥
ಮನ್ನಣೆಯ ಪರಿಯೆಂತು ಪೇಳು ನಿಂನ್ನಂಗದೊಳು
ಚೆನ್ನಶಿವಲಿಂಗಸಂಗವಗೈದೆನೆಂದೊಡನೆ
ಮುನ್ನಕೆಡಿಸುತೆ ಕಾಡುವಂ ಶಿವನು ಕಾಮನೆಂಬುವ ಬಯಕೆಯಲ್ಲಿ ಮತ್ತೆ ॥೩೩॥

ಲಿಗದೊಳಗಂಗಮಂ ತಂದು ಸಿಕ್ಷೇಪಿಸಲ್
ಕಂಗಳಿಂದತ್ತತ್ತಲೋಸರಸಿ ಓಡುವಂ
ಸಂಗಕ್ಕೆ ಹೆಣ್ಣು ಗಂಡಾದಾಗಳೊಲಿಯುವನು ಕೇಳವ್ವ ನಿನಗೆ ಶಿವನು ||
ತುಂಗಕೂಡಲಸಂಗನಂ ಬೆರೆಸುವಡೆ ನೀನು
ಭಂಗಭೇದನನಳಿದು ಕಲಿಯಾಗಬೇಕವ್ವ
ಪಿಂಗದಲೆ ಬಸವರಾಜಂ ಮಹಾದೇವಿಯಕ್ಕನಂ ನೆರೆನುಡಿಸುತಿರಲು ||೩೪||

ಕಾಮನಂಗೆಲಿದೆ ಬಸವಾ ನಿಮ್ಮ ದಯೆಯಿಂದೆ
ಸೇವೆಮಧರನೆಳೆತರುವೆ ಬಸವ ನಿಮ್ಮೊಲವಿಂದೆ
ನಾಮದೊಳು ಹೆಣ್ಣೆಂಬ ಹೆಸರಾದಡೇನಾಯ್ತು ಭಾವಿಪೊಡೆ ಗಂಡುರೂಪು ||
ನೇಮದಿಂದತಿಕಾಮಿ ಚೆನ್ನಮಲ್ಲಾರ್ಯಂಗೆ
ಪ್ರೇಮದಿಂ ತೊಡರಿಕ್ಕಿ ಯರಡುವರಿಯದೆ ಬೆರೆದೆ-
ನೈ ಮಹಾಬಸವ ನಿಮ್ಮಯ ದಯಯೊಳಾನೆನ್ನುತಿಂತವಳು ಪೇಳುತಿರಲು ||೩೫||

ಭಾವಿಸುತೆ ನೋಡಿದಡೆ ಲಿಂಗವಾಯಿಷ್ಟಂಗ-
ದಾ ವಿವಿಧ ಗುಣವಳಿಯುತುಳಿದಬಳಿಕಾನು ನಿನ-
ಗಾವರಿಸಿದಂಗವಾಗಿಪ್ಪೆನೈ ಭಿನ್ನರುಚಿಯಂ ಬಿಟ್ಟು ಲಿಂಗರುಚಿಯ ||
ಈ ವಿಧದೊಳಾದ ಬಳಿಕಾ ಚೆನ್ನಮಲ್ಲನಂ
ಭಾವದೊಳು ಕೊಂದು ಸಾಯುವ ಭಾಷೆಯೆಂದು ಮಾ-
ದೇವಿ ನುಡಿಯಲು ಬಸವರಾಜನಾಗಿಂತು ಪ್ರಶ್ನಿಸಿದನನುನಯದಂದಲೆ ||೩೬||

ಅಳಿವವನು ತಾನಲ್ಲಮುಳಿವವನು ತಾನಲ್ಲ
ಪ್ರಳಯವರಿಯದ ಮುನ್ನವರಿಯ ಸಕಳಾಕುಳ-
ಕ್ಕೊಳಗಾಗದವನಾಗಿಯುಭಯಕುಳರಹಿತನಾಗಿರುವ ಬಯಚಿಟ್ಟು ಮತ್ತೆ ||
ತಿಳಿಯಲ್ಕೆ ಮೆರೆವ ಗಮನಿಯುಮಲ್ಲ ನಿರ್ಗಮನ-
ಮನಘ ಕೂಡಲಸಂಗನೆಂಬವಾಙ್ಮಮುಗ್ಧನಂ
ಫಲಿತ ಭಾವದ ಬಳಿಕೆಯಲ್ಲಿ ಗೆಲಲಹುದೆ ಹೇಳೌ ತಾಯೆ ಎಂದೆನಲ್ಕೆ ||೩೭||

ನೀವೆಯೆನ್ನಣ್ಣಂದಿರೆಂದು ಮಾದೇವಿನು-
ತ್ತೋವಿ ಚಂದನವ ನೆರೆ ಕಡಿದು ತೆಯ್ದೊಡೆ ಸೊಂದೆ-
ನೇವನೆನ್ನುತೆ ಕಂಪ ಬಿಟ್ಟತ್ತೆ ಕನಕವನು ತಂದು ಕರಗಿಸೆ ಬೇಯುತಾ ॥
ಸೌವರ್ಣಮದು ಕಲಂಕವನು ಪಿಡಿದಿತ್ತೇನು
ದೇವ ಕೇಳ್ ಸಂದುಸಂದಂ ಕಡೆದು ಕಬ್ಬ ತಂ-
ದೋವದಲೆ ಗಾಣದೊಳಗಿಕ್ಕಿ ಪಾಕಂ ಮಾಡಲಾ ಕಬ್ಬು ನೊಂದೆನೆಂದು ॥೩೦॥

ಸವಿಯ ಬಿಟ್ಟತ್ತೆ ನಾನೆಸಗಿರುವ ಹೀನವೆ-
ಲ್ಲವ ತಂದು ಮುಂದಿಳುಹಲೇಂ ನಿಮಗೆ ಹಾನಿಯೇ
ಶಿವದೇವ ವರ ಚೆನ್ನಮಲ್ಲೇಶಕೊಂದಡಾಂ ಶರಣೆಂಬುದಂ ಮಾಣೆನು ॥
ಅಂಗನೆ ಸದಂಗನೆಯ ರೂಪವಲ್ಲದೆ ಮತ್ತೆ
ಪಿಂಗದಲೆ ಮನವಸ್ತುಭಾವದೋಳ್ ಬೆಚ್ಚಂತೆ
ಭಂಗಿಸಲಿಹುದು ನೀಂ ಬಂದ ಕಥನದೆ ಬಂದು ಹಿಂಗಿರುವೆಯಲ್ಲ ಅಕ್ಕ ॥೩೧॥

ವರಗುಹೇಶ್ವರಲಿಂಗದೊಳುಭಯಂ ನಾಸ್ತಿ ಮನ-
ಮುರೆನಾಶವಾಯಿತೌಯೆಂದು ಪ್ರಭು ವರ್ಣಿಸಲು
ನೆರೆದಂಗ ಸಂಗದೊಳು ಲಿಂಗಸಂಗಿಯಾದೆನು ಲಿಂಗಸಂಗದೊಳು ನಾ ॥
ಚಿರಮಂಗಲಿಂಗಿಯಾಗಿಹೆನುಭಯಸಂಗವ-
ನ್ನರಿಯದಲೆ ಪರಿಣಾಮಿಯಾದೆನ್ನೆ ನುಡಿಗಡಣ-
ವಿರೆಮರೆದು ತೆರೆಯಿಲ್ಲದಿರ್ದೊಡೇಂಚೆನ್ನಮಲ್ಲಾರ್ಯನೊಳ್ ಬೆರಸಿ ಬಳಿಕ ॥೩೨॥

ಎನ್ನನಾನೇನೆಂದು ತಿಳಿದೆನೆಂದೊರೆಯೆನ್ನೆ
ನಿನ್ನಂಗದೊಳು ಲಿಂಗಸಂಗಮಂ ಲಿಂಗದೊಳು
ನಿನ್ನಂಗಸಂಗಮಂ ಮಾಡಿರುವನೆಂದೊಡುಂ ಸಂದಭೇದವನಳಿಯುವ ॥
ಮನ್ನಣೆಯ ಪರಿಯೆಂತು ಪೇಳು ನಿಂನ್ನಂಗದೊಳು
ಚೆನ್ನಶಿವಲಿಂಗಸಂಗವಗೈವೆನೆಂದೊಡನೆ
ಮುನ್ನಕೆಡಿಸುತೆ ಕಾಡುವಂ ಶಿವನು ಕಾಮವೆಂಬುವ ಬಯಕೆಯಲ್ಲಿ ಮತ್ತೆ ॥೩೩॥

ಲಿಗದೊಳಗಂಗಮುಂ ತಂದು ಸಿಕ್ಷೇಪಿಸಲ್
ಕಂಗಳಿಂದತ್ತತ್ತಲೋಸರಸಿ ಓಡುವಂ
ಸಂಗಕ್ಕೆ ಹೆಣ್ಣು ಗಂಡಾದಾಗಳೊಲಿಯುವನು ಕೇಳವ್ವ ನಿನಗೆ ಶಿವನು ||
ತುಂಗಕೂಡಲಸಂಗನಂ ಬೆರೆಸುವಡೆ ನೀನು
ಭಂಗಭೇದವನಳಿದು ಕಲಿಯಾಗಬೇಕವ್ವ
ಪಿಂಗದಲೆ ಬಸವರಾಜಂ ಮಹಾದೇವಿಯಕ್ಕನಂ ನೆರೆನುಡಿಸುತಿರಲು ||೩೪||

ಕಾಮನಂಗೆಲೆದೆ ಬಸವಾ ನಿಮ್ಮ ದಯೆಯಿಂದೆ
ಸೇವೆಮಥರನೆಳೆತರುವೆ ಬಸವ ನಿಮ್ಮೊಲವಿಂದೆ
ನಾಮದೊಳು ಹೆಣ್ಣೆಂಬ ಹೆಸರಾದಡೇನಾಯ್ತು ಭಾವಿಪೊಡೆ ಗಂಡುರೂಪು ||
ನೇಮದಿಂದತಿಕಾಮಿ ಚೆನ್ನಮಲ್ಲಾರ್ಯಂಗೆ
ಪ್ರೇಮದಿಂ ತೊಡರಿಕ್ಕಿ ಯರಡುವರಿಯದೆ ಬೆರೆದೆ-
ನೈ ಮಹಾಬಸವ ನಿಮ್ಮಯ ದಯಯೊಳಾನೆನ್ನುತಿಂತವಳು ಪೇಳುತಿರಲು ||೩೫||

ಭಾವಿಸುತೆ ನೋಡಿದಡೆ ಲಿಂಗವಾಯಿತ್ತಂಗ-
ದಾ ವಿವಿಧ ಗುಣವಳಿಯುತುಳಿದಬಳಿಕಾನು ನಿನ-
ಗಾವರಿಸಿದಂಗವಾಗಿಪ್ಪೆನೈ ಭಿನ್ನರುಚಿಯಂ ಬಿಟ್ಟು ಲಿಂಗರುಚಿಯ ||
ಈ ವಿಧದೊಳಾದ ಬಳಿಕಾ ಚೆನ್ನಮಲ್ಲನಂ
ಭಾವದೊಳು ಕೊಂದು ಸಾಯುವ ಭಾಷೆಯೆಂದು ಮಾ-
ದೇವಿ ನುಡಿಯಲು ಬಸವರಾಜನಾಗಿಂತು ಪ್ರಶ್ನಿಸಿದನನುನಯದಂದಲೆ ||೩೬||

ಅಳಿವವನು ತಾನಲ್ಲಮುಳಿವವನು ತಾನಲ್ಲ
ಪ್ರಳಯವರಿಯದ ಮುನ್ನವರಿಯ ಸಕಳಾಕುಳ-
ಕ್ಕೊಳಗಾಗದವನಾಗಿಯುಭಯಕುಳರಹಿತನಾಗಿರುವ ಬಯಚಿಟ್ಟು ಮತ್ತೆ ||
ತಿಳಿಯಲ್ಕೆ ಮೆರೆವ ಗಮನಿಯುಮಲ್ಲ ನಿರ್ಗಮನ-
ಮನಘ ಕೂಡಲಸಂಗನೆಂಬವಾಙ್ಮಮುಗ್ಧನಂ
ಫಲಿತ ಭಾವದ ಬಳಿಕೆಯಲ್ಲಿ ಗೆಲಲಹುದೆ ಹೇಳೌ ತಾಯೆ ಎಂದೆನಲ್ಕೆ ||೩೭||

ಲಿಂಗದೊಳ ಗಂಗವಾಗಿರಲು ಲಿಂಗೈಕ್ಯತೆಯ
ನಾಂಗೈದೆ ಮನದೊಳಗೆ ಮನವಾಗಿ ಮನವನುರೆ
ಲಿಂಗೈಕ್ಯಮಾಡಿದೆನು ಭಾವದೊಳು ಭಾವವಾಗಿರೆ ಭಾವಲಿಂಗೈಕ್ಯವ ||
ನಾಂಗೈದೆನರಿವಿನೊಳಗರಿವಾಗಿಯರಿವನೊರೆ
ಲಿಂಗೈಕ್ಯವೆಸಗಿದೆನು ಕ್ರಿಯೆಗಳೆಲ್ಲವ ನಿಲಿಸಿ
ತುಂಗಕ್ರಿಯಾತೀತವಾಗಿ ನಿಷ್ಪತ್ತಿ ಲಿಂಗೈಕ್ಯವಾದೆನು ತಿಳಿಯಿರೈ || ೩೮ ||

ನಾನೆಂಬುದನು ನಿಲಿಸಿ ನೀನೆಂಬುದನು ಕೆಡಸಿ-
ಯೊನೆರಡು ಲಿಂಗೈಕ್ಯವೆಸಗಿದೆನು ಕೇಳಿರೈ
ಮೌನದಿಂ ಚೆನ್ನಮಲ್ಲೇಶನೊಳಗಾನಳಿದೆನಾಗಿ ತಲ್ಲಿಂಗವೆಂಬ ||
ಜ್ಞಾನಘನವೆನ್ನೊಳಗುಮಳಿಯಿತ್ತು ಕಾಣಿರೈ
ಜ್ಞಾನಿ ಸಂಗನಬಸವ ತಂದೆ ನೀವೇ ಯೆನಲು
ಸಾನುರಾಗದೆ ಮೆಚ್ಚಿ ಪ್ರಾಕ್ತನರಿಂಗೆಲ್ಲರಿಗು ತೋರುತೀಪರಿ ಪೊಗಳ್ದನು || ೩೯ ||

ನಿರುಕಿಸಿರಿ ಪ್ರಾಕ್ತನರೆ ಈ ಹೆಣ್ಣಿನಂಗಮಂ
ನಿರುಕಿಸಿರಿ ಬಾಲತನದಂಗಮಂ ನೀವೊಲಿದು
ನಿರುಕಿಸಿರಿ ಬ್ರಹ್ಮವಂ ಚರಿಸಿ ತನ್ನಂಮರೆದು ನಿಂದುದಂಲಿಂಗಿಗಳಿರಾ ||
ಬೆರೆದು ತನ್ನೊಳು ತಾನು ನಿಜವಾಗಿ ಭಾಷೆಬೀ
ಸರವೋಗದಿರ್ಪಳ್ಳೆ ತಿಳಿವುಕೂಡಲಸಂಗ-
ಪರಮನೊಳು ಮಾದೇವಿಯಕ್ಕಗಾಯಿತ್ತರಿಯಿರೈ ಯೆಂದುನುತಿಸಲಾಗ || ೪೦ ||

ನಿನ್ನಂಗದಾಚಾರಮಂ ಕಾಣುತೆನಗೆ ಲಿಂ-
ಗೋನ್ನತಿಯ ಸಂಗವಾಯಿತ್ತಯ್ಯ ಬಸವಣ್ಣ
ಇನ್ನುನಿಮ್ಮಯ ಮನಸುಜ್ಞಾನಮಂ ಕಾಣುತಾಯಿತ್ತು ಚರಸಂಗವು ||
ನಿನ್ನಸದ್ಭಕ್ತಿಯಂ ತಿಳಿದೆನ್ನ ನಿಜವೀಗ
ಚನ್ನಾಗಿಸಾಧ್ಯವಾಯಿತ್ತಯ್ಯಬಸವಣ್ಣ
ಚೆನ್ನಮಲ್ಲೇಶ್ವರನ ಹೆಸರಿಟ್ಟ ಗುರುವೆ ನೀನಾದ ಕಾರಣವೆಂದಿಗು || ೪೧ ||

ನಾನೆಂಬದಿಲ್ಲಯ್ಯ ಬಸವಣ್ಣ ತಿಳಿಯೆಂದು
ಸಾನುರಾಗದೆ ಮತ್ತೆ ನುತಿಸಲಾದಳು ಶರಣೆ
ಯೂನವಿಲ್ಲದೆ ಲಿಂಗದೊಳು ಸದಾಚಾರಮಂ ತೋರಿದನು ಸ್ವಾಚಾರವ ||
ನೂನಮೆನೆ ಲಿಂಗಮೆಂದರುಹಿದನು ಮತ್ತೆನ್ನ
ಪ್ರಾಣದೊಳಗರಿವ ನೆಲೆಗೊಳಿಸಿರುವನಾ ಅರಿವೆ
ಮಾಣದಲೆ ಜಂಗಮುವೆನುತ್ತೆ ತೋರಿದನಿವನೆ ಚೆನ್ನಮಲ್ಲೇಶ್ವರನನು || ೪೨ ||

ಹೆತ್ತತಂದೆಯು ಬಸವಲಾಜನೆನಗೀ ಕ್ರಮವ
ಸತ್ಯಮೆನಲರುಹಿದನು ಕೇಳಿರೈಯೆಂದೆನುತಿ
ಮತ್ತ ಮಾ ಬಸವೇಶ ಮಹಿಮೆಯಂ ಶರಣರೊಪ್ಪಲ್ಕಮಿಂತುರೆ ಪೊಗಳ್ದಳು ||
ಮತ್ತೆನುಡಿದಳು ಶಿವಶಿವಾದ್ಯನಾದಿಗಳೆಂಬ
ಉಕ್ತಿಯಿರಲದವಯವದ ಶೂನ್ಯನಾಗೆಸೆದಿರುವ
ಸತ್ಯಮೂಲನೆ ನಿಮ್ಮ ನಿಜವನಾರಯ್ಯ ಬಲ್ಲವರಾರು ಹೇಳು ತಂದೆ || ೪೩ ||

ವೇದಕ್ಕಭೇದ್ಯನುರುಶಾಸ್ತ್ರಕ್ಕಸಾಧ್ಯನುರೆ
ಶೋಧಿಸೆ ಪುರಾಣಕ್ಕೆ ಪುಣ್ಯನಾಗಮುಗಳಿಗೆ
ಬೋಧಿಸಲಗೋಚರಂ ತರ್ಕಕ್ಕತರ್ಕ್ಯನುಂ ವಾಙ್ಮನೋತೀತನಾಗಿ ||
ಐದೆಸೆವ ಲಿಂಗಕ್ಕೆ ಸಕಲನೆಂಬರ್
ವಾದಿಪರು ಕೆಲರು ನಿಷ್ಕಲನೆಂದು ಸೂಕ್ಷ್ಮವೆಂ-
ದೋದಿಪರು ಕೆಲರವಂ ಸ್ಥೂಲಮೆಂದೀ ಬಗೆಯ ಭಾವದಿಂ ಹರಿವಿಧಿಗಳು ||೪೪||

ರವಿಚಂದ್ರ ಕಾಲೇಂದ್ರ ಕಾಮದಕ್ಷಾಸುರಸು-
ರವಿತತಮನುಷ್ಯರೊಳಗಾದವರದೆಲ್ಲರುಂ
ತವೆ ಕಾಣಲರಿಯದ: ಜ್ಞಾನದಿಂ ಭವಭಾರಿಗಳುವೆ:ನಿಸಿ ಹೋದರಯ್ಯ ||
ಇವರಂತೆ ಬರಿದೆ ಬಂದೈದಬಾರದೆನುತ್ತೆ
ಶಿವನ ಕೃಪೆಯಿಂದೆಮ್ಮ ಬಸವಣ್ಣನೀ ಲೋಕ-
ದವರ ಕಲ್ಯಾಣಾರ್ಥವಾಗಿ ಮರ್ತ್ಯಕ್ಕಿಳಿದು ವೀರಶೈವಮಾರ್ಗವ ||

ಅರುಹಲ್ಕೆ ಸುಜ್ಞಾನ ವಿವರವನ್ನೊಳಕೊಂಡು
ಚರಿಸುತಿಹನೆಂತೆಂದೊಡಿವನು ಗುರುಕಾರುಣ್ಯ
ಪರಿವೇದ್ಯನುಂ ಭೂತಿ ರುದ್ರಾಕ್ಷಿನುಂತ್ರಾನ್ವಿತಂ ಲಿಂಗ ಸಂಬಂಧಿಯು ॥
ನಿರುತ ಲಿಂಗಾರ್ಚಕಂ ಸ್ವಾರ್ಪಿತದೊಳವಧಾನಿ
ಚರಣೋದಕಪ್ರಸಾದಗ್ರಾಹಕಂಪರಮ
ಗುರುಭಕ್ತಿಸಂಪನ್ನನೇಕಲಿಂಗೋರುನಿಷ್ಠಾಪರನು ಚರಲಿಂಗದೆ ॥೪೬॥

ನಿರುತಲೋಲುಪ್ತನುಂ ಸಂಗಮೇಶ್ವರಶರಣ-
ನುರೆ ತ್ರಿವಿಧಕಾಯಂ ತ್ರಿಕರಣದೆ ಶುದ್ಧನುಕಂ
ಸರಸಮೆನಲಾ ತ್ರಿವಿಧಲಿಂಗಾಂಗಸಂಬಂಧಿಯನ್ಯದೈವಸ್ಮರಣೆಯ ॥
ನೆರೆಹೊದ್ದ ಭವಿಯ ಸಂಗವಮಾಡಿ ಭವಿಪಾಕ
ವಿರೆಮುಟ್ಟ ಪರಸತಿಯ ಪರಧನವಪದನು
ನಿರುಕಿಸನು ಪರನಿಂದೆಯಂ ಮಾಡನನೃತಮಂ ನುಡಿಯತಾಮಸ ಭಕ್ತರ ॥೪೭॥

ಸರಸಸಂಗವಮಾಡಿ ಗುರುಲಿಂಗಜಂಗಮಕೆ
ಮರೆಯದರ್ಥಪ್ರಾಣವಭಿಮಾನವೆಲ್ಲವನು
ನೆರೆಸಮರ್ಪಿಸಿ ಪ್ರಸಾದಂ ಗೈದು ಭೋಗಿಪನು ಪರನಿಂದೆಯಂ ಸಹಿಸನು ॥
ಪರಮಪ್ರಸಾದ ನಿಂದೆಯನಾಗಳುಂ ಕೇಳ
ಪರರನಾಶಿಸನು ಪಾತ್ರಾಪಾತ್ರಮಂ ತಿಳಿವ-
ನುರು ಚತುರ್ವಿಧಪದವಿಯಂ ಹಾರನರಿವರ್ಗಕಳುಕನೆಂದೆಂದಿಗಿವನು ॥೪೮॥

ಕುಲಮುಖ್ಯ ಮದವಬಗೆಗೊಳ್ಳ ದ್ವೈತಾದ್ವೈತ
ಗಳನುಡಿವನಲ್ಲಿವನು ಸಂಕಲ್ಪ ಸುವಿಕಲ್ಪ-
ಕಳುಕ ಕಾಲೋಚಿತವ ಬಲ್ಲ ಕ್ರಮಯುಕ್ತನಾಗುತ್ತೆ ಷಟ್‌ಸ್ಥಲಭರಿತನು ॥
ಹೊಳೆವ ಸರ್ವಾಂಗ ಲಿಂಗಿಯು ನಿತ್ಯ ದಾಸೋಹಿ
ತಿಳಿಯಲಿಂತೀದ್ವಿಪಂಚಾಶದ್‌ವಿಧಗುಣಂಗ-
ಳೊಳು ನಿಪುಣನಾಗಿ ಮೆರೆವಂ ನಮ್ಮ ಬಸವಣ್ಣನಿವನ ಶ್ರೀಪಾದಗಳಿಗೆ ॥೪೯॥

ನಿರುತವಾನುರೆ ನಮೋನಮಯೆಂದು ಬದುಕಿರುವೆ-
ನರಿಯಯ್ಯ ಚೆನ್ನಮಲ್ಲನೆಯೆಂದು ವಚನವನು
ಸರಸದಿಂ ಪಾಡುತ್ತೆ ಮತ್ತೆ ಬಸವನಲ್ಲಮನ ಚೆನ್ನಬಸವಣ್ಣನ ||
ನೆರೆನುತಿಸ ತೊಡಗಿದಳು ನನ್ನ ಭಕ್ತಿಯೆ ನಿಮ್ಮ
ದರುಮವೆನ್ನೀ ಜ್ಞಾನವೇ ಪ್ರಭುವಿನುರುಧರ್ಮ
ಪರಿಣಾಮವೇ ಚೆನ್ನಬಸವಣ್ಣನುರುಧರ್ಮವೀಮೂವರೊಂದೊಂದನು ||೫೦||

ಕರುಣಿಸಿದರೆನಗಾಗಿ ಮೂರು ಭಾವವದಹುದು
ಮರೆಯದೀ ಮೂರನ್ನು ನಿಮ್ಮೊಳು ಸಮರ್ಪಿಸಲ್
ಕಿರಿದೆನಗದಾವ ಜಂಜಡವು ವರಚೆನ್ನಮಲ್ಲಾರ್ಯನುರೆನೆನಹಿನಲ್ಲಿ
ಚಿರದೆ ನಿನ್ನಯ ಕರುಣೆಯರುಶಿಶುವುನಾನಯ್ಯ
ನಿರುಕಿಸೈ ಚೆನ್ನಬಸವಣ್ಣನೆನಲಾ ಶರಣೆ
ಯೊರೆದನಾ ಪ್ರಭುವಲ್ಲಮಂ ಮಹಾದೇವಿಯಕ್ಕನ ನುತಿಯ ವಚನವನ್ನು ||೫೧||

ಆದಿಯಹನಾದಿಯಹ ಶಕ್ತಿಯನು ಬಲ್ಲಿರಾ-
ರಾದಿಯೆಂದೊಡೆ ಉರುಹಿಗೈದಿತ್ತು ಕೇಳಯ್ಯ-
ನಾದಿಯೆಂದೊಡೆ ನಾಮಕೈದಿತು ತದಾದಿಯಲ್ಲದನಾದಿಯಲ್ಲ ತಿಳಿಯೆ
ಐದಿಲ್ಲ ನಾಮಗಳು ಲೀಮೆಯಿಲ್ಲದಕೆ ನಿಜ
ವಾದಶಕ್ತಿಯು ಮತ್ತೆ ಚಿಚ್ಛಕ್ತಿಯಾಯಿತ್ತು
ಶೋಧಿಸಲ್ಕಂತರಂಗವ ಪ್ರಭೆಯು ಬಹಿರಂಗವೆಲ್ಲ ತಾನೆಯದಾಗುತಾ ||೫೨||

ಪರಗುಹೇಶ್ವರ ಲಿಂಗದಲ್ಲಿ ಸಂದಿಲ್ಲದಿರ್
ಪುರುಮಹಾದೇವಿಯಕ್ಕನ ಮಹಾಪಾದಕ್ಕೆ
ನಿರುತಂ ನಮೋ ನಮೋ ಎನುತಲಿರ್ದೆನು ನೋಡು ಚೆನ್ನಬಸವಣ್ಣ ತಿಳಿದು ||
ಕರತಲದ ಲಿಂಗದಲಿ ಕಂಗಳುರೆ ನೋಟವದು
ನೆರೆನಿಂದು ಸ್ವಯವಾದ ಪರಿಯನೋಡೈ ತನ್ನ
ಪರಮಾನುಭವದುದಯದಿಂದೆ ತನ್ನಂ ತಿಳಿದ ನಿಜಶಕ್ತಿಯಂ ನಿರುಕಿಸೈ || ೫೩ ||

ಭಿನ್ನವಿಲ್ಲದಿರಲ್ಕೆ ಮನ್ನಣೆಯ ಮಮಕಾರ-
ವನ್ನು ಮೀರಿದ ಭಾವವಿರೆ ಬೆರೆದು ಕಾಣುವಳು
ತನ್ನಿಂದೆ ತಾನಾಗಿ ನಮ್ಮಯ ಗುಹೇಶ್ವರನ ಅಂಗದೊಳು ಸಂದಿಲ್ಲದೆ ॥
ಚನ್ನಾಗಿ ನೆಲಿಸಿದ ಮಹಾದೇವಿಯಕ್ಕನನು-
ಹೋನ್ನತಿಯ ನಿಲವಿಂಗೆ ನೆರೆ ನಮೋನಮಯೆಂದು
ಮನ್ನಿಸುತಲಿರ್ದೆ ಕಾಣಾ ಚೆನ್ನಬಸವಣ್ಣಯೆನೆ ಚೆನ್ನಬಸವನೊರೆದಾ ॥೫೪॥

ಅಜಕೋಟಿ ವರುಷದವರೆಲ್ಲರುಂ ಹಿರಿಯರೇ
ನಿಜವೆನಲು ಹುತ್ತೇರಿ ಬೆತ್ತಬೆಳೆದಿಹ ತಪ-
ಸ್ವಿಜನರ್ಕಳೆಲ್ಲರುಂ ಹಿರಿಯರೇ ನಡುಮುರಿದುಗುಡಗೂರಿತಲೆನಡುಗುತಾ ॥
ರುಜೆವಿಡಿದು ನೆರೆತೆರೆಯು ಹೆಚ್ಚಿ ಮತಿಗೆಟ್ಟು ಮೇಣ್
ಯಜಮಾನರೆನಿಸಲೊಂದಂ ನುಡಿಯುತೊಂಬತ್ತ
ಗಜುಗುಟ್ಟುವಜ್ಞಾನಿಗಳದೆಲ್ಲ ಹಿರಿಯರೇನನುವರಿದು ಘನವರಿಯುತಾ ॥ ೫೫ ॥

ಹಿರಿದುಕಿರಿದೆಂಬ ಭೇದವನೆಲ್ಲ ಮರೆಯುತ್ತೆ
ಪರಮ ಕೂಡಲ ಚೆನ್ನಸಂಗಯ್ಯನೊಳು ಬೆರಸು
ತೆರಹಿಲ್ಲದಿರ್ಪ ಪಿರಿತನವು ನಮ್ಮಯ ಮಹಾದೇವಿಕ್ಕಂಗಾಯಿತು ॥
ಅರಿದೆನಹುದಹುದು ಮತ್ತೇನು ಮರಹಿಂಗೆ ಹಿರಿ-
ಕಿರಿದಿರುವದಲ್ಲದಲೆ ತಿಳುವಿಂಗೆ ಹಿರಿದು ಕಿರಿ-
ದಿರುವುದೇ ಹೇಳಯ್ಯ ಸಾವಿಂಗೆ ಭಯುವಿರುವಲ್ಲದಲಜಾತ ಶಿವಗೆ ॥ ೫೬ ॥

ಮತ್ತೆ ಭೀತಿಯೆ ಕಪಿಲಸಿದ್ಧ ಮಲ್ಲಯ್ಯನೊಳು
ಸ್ತುತ್ಯಳಹ ಮಾದೇವಿಯಕ್ಕನಾ ನಿಲವಿಂಗೆ
ನಿತ್ಯದೊಳು ಶರಣೆಂದು ಶುದ್ಧನಾಗಿಹೆನು ಕಾಣೇ ಚೆನ್ನಬಸವಣ್ಣನೇ ॥
ಮರ್ತ್ಯಲೋಕದ ಭಕ್ತಮನವ ಬೆಳಗಲ್ಕೆಂದು
ಮರ್ತ್ಯಕ್ಕೆ ನಡೆತಂದು ಶಂಕರನು ಸಹಜಮೆನೆ
ಕತ್ತಲೆಯ ಪಾಳಯುವ ರವಿಯು ಹೊಕ್ಕಂತಾಯಿತಯ್ಯ ನೀವೆಲ್ಲಕೇಳಿ ॥ ೫೭ ॥

ಚಿತ್ತದುರೆಪ್ರಕೃತಿಯಂ ಪಿಂಗಿಸುತೆ ಲೋಕಕ್ಕೆ
ಮುಕ್ತಿಯುರುಪದವತೋರಿದನುತಃನಲ್ಲಯ್ಯ
ಮತ್ತಸಖ್ಯಾಂತ ಸತ್ಪ್ರಮಥರಿಗೆ ತನುವೆಲ್ಲ ಸ್ವಯಲಿಂಗ ಮನವೆಲ್ಲವೂ ||
ಉತ್ತಮದ ಚರಲಿಂಗ ಭಾವವೆಲ್ಲವು ಮಹಾ-
ಸತ್ಯವಹ ಘನ ಬೆಳಗು ಚೆನ್ನಮಲ್ಲಾರ್ಯನೆ
ನಿತ್ಯ ನಿಮ್ಮಯ ಶರಣನನುಳಸುಜ್ಞಾನಿವರಚೆನ್ನ ಬಸವಣ್ಣನಡಿಗೆ || ೫೮ ||

ಶರಣೆನ್ನುತೆನ್ನ ಭವಮದುನಾಸ್ತಿಯಾಯಿತ್ತು
ಪರತರಪ್ರಭುವೆಯೆನಲಾಪ್ರಭುವರಂ ನೆರೆನುಡಿದ
ನುರುತನುಗುಣಂನಾಸ್ತಿಗೊಳೆ ಲಿಂಗಸಂಗವನು ಮನಗುಣಂ ನಾಸ್ತಿಯಾಗೆ ||
ಅರುವಿನುರೆ ಸಂಗದಿಂ ಭಾವಮದು ನಾಸ್ತಿಯಾ-
ಗಿರೆ ಮಹಾಪ್ರಭೆಯ ಪಡೆದಳು ತಾನುಮಿದಿರೆಂಬ-
ವೆರಡಳಿದು ನಮ್ಮಯ ಗುಹೇಶ್ವರನ ಲಿಂಗದೊಳು ಸ್ವಯಲಿಂಗವಾಗಿ ಮೆರೆವ ||೫೯||

ವರಮಹಾದೇವಿಯಕ್ಕಗಳ ನಿಲವಿಂಗೆ ನಾ
ಶರಣೆನ್ನುತಿರ್ದೆನ್ನೈಯೆನಲು ಶರಣೆಯು ನುಡಿದ-
ಳರಿಯೆ ಪಾಲ್ನೀರುಗಳ ತೆರದಿ ನೀನಿರುತಿರಲ್ಕಾವುದುಂ ಮುಂದು ಹಿಂದು ||
ಅರಿಯೆನಾವದುಕರ್ತೃವಾವುದುಂ ಭೃತ್ಯನೆಂ
ದರಿಯೆನಾವುದು ಘನವದಾವುದುಂ ಕಿರಿದೆಂಬು-
ದರಿಯೆನ್ನೈ ಚೆನ್ನಮಲ್ಲಾರ್ಯ ನೀನೊಲಿದು ಕೊಂಡಾಡಲಿರುಬೆಯು ಲೋಕದೆ ||೬೦

ಶಿವನಾಗದೇ ಹೇಳಿರೆನೆ ಚೆನ್ನಬಸಣ್ಣ-
ನವಧಾನದಿಂದೊರೆದನಾದ್ಯರರವತ್ತುವಚ-
ನವಿತಾನಕಂ ದಂಡನಾಯಕರ ಇಪ್ಪತ್ತು ವಚನವಾದಂಡವರನಾ ||
ಸುವಚನದ ವಿಂಶತಿಗೆ ಪ್ರಭುವರನ ದಶವಚನ-
ಮವನರಿಯೆ ಪ್ರಭುವಚನಕಜಣ್ಣನೈದುವಚ-
ನವೆ ಸಮವದಜಗಣ್ಣದುವಚನಕ್ಕೆ ಕೂಡಲಚೆನ್ನಸಂಗಯ್ಯನೋಳ್ ||೬೧||

ವರಮಹಾದೇವಿಯಕ್ಕಗಳೊಂದು ವಚನವದು
ನಿರುವಚನ ಕಾಣಯ್ಯ ಸಿದ್ಧರಾಮನೇ ಎನಲ್
ಕರಿದನಿತರೊಳು ಬಸವರಾಜನಿಂತೊರೆದನೆನ್ನಯ ಭಕ್ತಿ ಶಕ್ತಿ ನೀನೆ ॥
ಅರಿಯಲೆನ್ನಯ ಯುಕ್ತಿ ಶಕ್ತಿಯುಂ ನೀನೆನ್ನ
ಪರಮ ಮುಕ್ತಿಯು ಶಕ್ತಿಯುಂ ನೀನೆಯೆನ್ನಸಮ-
ತರಮಹಾ ಘನದ ನಿಲವಿನ ಪ್ರಭೆಯ ನುಟ್ಟು ತಳೆವೆಳಗಾದ ಸ್ವಾಯದ ಜ್ಞಾನಿ ॥೬೨॥

ಪರಮ ಕೂಡಲ ಸಂಗಮಯ್ಯನೋಳ್ ಮಾದೇವಿ-
ಯರನಿಲವ ಮಡಿವಾಳನಿಂದಿರಿದು ಬದುಕಿದೆನು
ನಿರುಕಿಸೈ ಪ್ರಭುವೆನೀವೆನಲಾಗ ಮಡಿವಾಳತಂದೆ ನುತಿಸಿದನೆಂತೆನೆ ॥
ಉರುಕಾಮಿಯಾಗಿ ನಿಷ್ಕಾಮಿಯಾದಳು ಸೀಮೆ
ಯರಿದಿರ್ದುನಿಸ್ಸೀಮೆಯಾದಳೈ ಭವಿಯುನ್ನು
ತೊರೆದು ಭವಬಾಧೆಯಂ ಹರಿದಳೈ ಬಸವಣ್ಣ ಗತಿಯೆಂದು ಭಾವಿಸುತ್ತಾ ॥೬೩॥

ಬರಲುನಾನಾಗ ಮಡಿಯಂ ಹಾಸಿನಡಿಸಿದೆನು
ಸರಸದಿಂ ನಡಿವುದಕೆ ಹಾಸಿದಾ ಮಡಿಯುನ್ನು
ಭರದೆ ಸರ್ವಾಂಗಕ್ಕೆ ಹಾಸಿದಾ ಮಡಿಯ ಬೆಳಗಿನೊಳು ನಿರ್ವಯಲಾದಳು ।
ಪರಮ ಕಲಿದೇವ ದೇವಯ್ಯನುರು-
ತರಮಹಿಮೆಯಂ ಬಸವಕೃಪೆಯಿಂದಲರಿದೆ ಪ್ರಭು-
ವರನೆಯೆನೆ ಪ್ರಭುವಿಂತು ನುಡಿದನಾ ವಚನವನು ನಾನೇನು ಬಣ್ಣಿಸುವೆನು ॥೬೪॥

ನುಡಿಗೆಡೆಯ ಗೊಡದ ಘನಮಂ ಪಿಡಿಯುತಾದಳೈ
ವಡಬಂದಿಎಡೆಯಿಲ್ಲದಾಪರಮ ಪೂರ್ಣದೊಳು
ನುಡಿಗೆಟ್ಟಳೈ ತನ್ನ ನಿಲುಕಡೆಯ ನಿಜವತಾನರಿಯದಂತಿರೆ ತನ್ನೊಳು ॥
ಒಡನೆ ಕೇಳುತ್ತೆ ಸ್ವಯವಾದಳರಿದು ಗುಹೇಶ-
ನಡಿಯ ಸಾಕ್ಷಿಯೊಳಾ ಮಹಾದೇವಿಯಕ್ಕಗಳ
ದೃಢತೆಯಂ ಕೊಂಡಾಡಲಿಕ್ಕೆ ತೆರೆಹಿಲ್ಲ ಕಾಣಯ್ಯ ಮಡಿವಾಳಯ್ಯನೆ ॥೬೫॥

ಎಲ್ಲರೆಲ್ಲವನರಿದು ಘನವೇನು ತನ್ನ ತಾ-
ನುಲ್ಲಸದೊಳರಿಯಬೇಕಲ್ಲದಲೆ ತನ್ನಲ್ಲಿ-
ಬಲ್ಲವಿಕೆ ಸ್ವಯವಾಗಲನ್ಯರಂ ಕೇಳಲುಂಟೇ ಚೆನ್ನಮಲ್ಲಯ್ಯನೆ ||
ಸೊಲ್ಲುವದದೇನರಿವೆ ನೀನಾಗಿ ಮುಂದೋರಿ
ದಲ್ಲಿನಿಮ್ಮಿಂದ ನಾನರಿದೆನಯ್ಯ ಪ್ರಭುವೆ
ಇಲ್ಲಿರುವ ಶರಣಸಹವಾಸದಿಂ ನಿಮ್ಮನರಿದೆನು ಕೇಳು ದಿಟವನರಿಯೆ || ೭೬ ||

ಸಂಗದಿಂದಲ್ಲದಗ್ನಿಯು ಹುಟ್ಟದೈ ಕೇಳು
ಸಂಗದಿಂದಲ್ಲದಲೆ ಬೀಜಮೊಳೆದೋರದೈ
ಸಂಗದಿಂದಲ್ಲದಲೆ ದೇಹವಾಗದು ಕೇಳುವರ ಚೆನ್ನಮಲ್ಲಿನಾಥ ||
ಸಂಗದಿಂದಲ್ಲದೇ ಸರ್ವಸುಖದೋರದೈ
ಪಿಂಗದಿಹ ನಿಮ್ಮ ಶರಣಾನುಭವಿಗಳಪರಮ-
ಸಂಗದಿಂದಾನು ಸಲೆಸುಖಿಯಾಗಿ ಬದುಕಿದೆನು ಪ್ರಭುವೆನುತೆ ಮತ್ತೊರೆದಳು ||೭೭||

ಅಯ್ಯನಿಮ್ಮನುಭಾವಿಗಳ ಸಂಗದಿಂ ತನುವು
ರಯ್ಯಮೆನೆ ಶುದ್ಧವಾಯಿತ್ತು ಸಲೆತಿಳಿವುದಿದೆ
ಯಯ್ಯ ನಿಮ್ಮನುಭಾವಿಗಳು ಮರೆದು ಕಡಿದರೆಯು ತನುಗೈದರಾಗಿ ತಿಳಿಯೆ |
ಅಯ್ಯಯೆನ್ನಯ ಮನವು ಶುದ್ಧವಾಯಿತು ತಿಳಿವು-
ದಯ್ಯಯೆನಯ ಭೋಗಗಳು ನಿಮ್ಮ ಶರಣರಿಗೆ
ವೊಯ್ಯನರ್ಪಿತಮಾಗಿ ಎನ್ನಪ್ರಾಣ ಶುದ್ಧವಾಯಿತ್ತು ತಿಳಿಯಿರಯ್ಯ || ೭೮ ||

ಎನ್ನ ಸರ್ವೇಂದ್ರಿಯವು ನಿಮ್ಮ ಶರಣರ ಮಹಾ-
ಮಾನ್ಯ ಪ್ರಸಾದವನು ಕೊಂಡ ಕಾರಣದಿಂದ-
ಲೆನ್ನ ಸರ್ವಾಂಗವತಿ ಶುದ್ಧವಾಯಿತ್ತಯ್ಯ ನಿಮ್ಮ ಶರಣರ್ಕಳಿಂತು ||
ಎನ್ನ ಸಲುಹಿದ ಕಾರಣ ನಿಮ್ಮ ಶರಣರಿಗೆ
ರನ್ನದೊಡವಾದೆನೈ ಪ್ರಭು ಚೆನ್ನಮಲ್ಲಾರ್ಯ
ನೆನ್ನಿಂದೆ ಪುಣ್ಯಾತ್ಮರಾರಯ್ಯಯೆಂದೆನುತೆ ಮತ್ತೊರೆದಳಾ ಶರಣೆಯು || ೭೯ ||

ಬಸವಣ್ಣನೀಮನೆಯ ಮಗಳಾದ ಕಾರಣಂ
ಸಸಿನದಿಂ ಭಕ್ತಿ ಪ್ರಸಾದಮಂ ನೀಡಿದನು
ಮಿಸುಪ ಶ್ರೀ ಚೆನ್ನಬಸವಣ್ಣನಾಳಿನ ಮಗಳು ನಾನಾಗಲೊಕ್ಕುದನ್ನು ||
ಒಸೆದಿತ್ತನಯ್ಯ ಪ್ರಭುವಿನ ತೊತ್ತಿನಾಳಿಗಾಂ-
ಶಿಶುವಾದ ಕಾರಣಂ ಜ್ಞಾನಶೇಷವನಿತ್ತು
ಎಸೆವ ಶ್ರೀ ಸಿದ್ಧರಾಮನ ಶಿಶುವಿನಾತ್ಮಜೆಯು ನಾನಾಗೆ ಸತ್‌ಕೃಪೆಯೊಳು ||೨೦||

ಪ್ರಾಣಪ್ರಸಾದಮಂ ಕರುಣಿಸಿದನೈ ಮತ್ತೆ
ನಾನು ಮಡಿಳಸ ಮನೆ ಮಗಳಾದ ಕಾರಣಮು–
ನೂನಮೆನಲಮಲ ಪ್ರಸಾದವನು ನಿಶ್ಚೈಸಿ ಕೊಟ್ಟನೈಯೆನಗೆ ನಲಿದು ||
ಸಾನುರಾಗದೊಳಿಂತಸಂಖ್ಯಾತರೆಲ್ಲರುಂ
ಮಾಣದಲೆ ತಮ್ಮ ಕರುಣೆಯ ಕಂದನೆಂದೊಲಿದು
ಕಾಣುತಂ ತಲೆದಡವಿ ರಕ್ಷಿಸಿದ ಕಾರಣಂ ಚೆನ್ನಮಲ್ಲಾರ್ಯನಡಿಗೆ ||೨೧||

ಯೋಗ್ಯಳಾಗಿಹನೆಂದು ನುತಿಸಿ ಮತ್ತಂ ತನ್ನ
ಭಾಗ್ಯಮಾದ್ಯೈಕ್ಯಸಂಪದವ ಬೇಡಿದಳು ಸ್ವೈ–
ಸರ್ಗಿಕಮೆನಲ್ ಶರಣರಂ ನುತಿಸುತಂ ಪ್ರಭುವಿನಡಿಗೆರುಗುತಂ ವಿನಯದೆ ||
ಭೋಗ್ಯವಹ ಕರ್ಮವೆಂಬುವ ಕದಳಿಯೆನಗೆ ವೈ–
ರಾಗ್ಯವಹ ಕಾಯವೆಂಬುವ ಕದಳಿ ನಿಮುಗಹುದು
ಶ್ಲಾಘ್ಯವಹ ಮಾಟವೆಂಬುವ ಕದಳಿ ಬಸವರಾಜಂಗೆ ಸದ್ಭಾವವೆಂಬ ||೨೨||

ಕದಳಿಯಾ ಚೆನ್ನಬಸವಣ್ಣಂಗೆ ಬಂ-
ದುದೆಭಾವಮಾಗಿ ಸಲೆ ಸಂದಿತ್ತು ನನ್ನ ಕಾ-
ಯದವಸಾನವ ಚೆನ್ನಮಲ್ಲಾರ್ಯ ನೀನೆನಲು ಪ್ರಭುವೊರೆದನಾಗ ನಲಿದು ||
ಸದಮಲಳೆ ಕಾಯವುಳ್ಳನ್ನಕ್ಕ ಶರಣಸಂ-
ಗದೊಳಿರಿಯಬೇಕು ಜೀವವದುಮಿರುವನಕ ಗ್ಯಾ-
ನದ ಮುಖದೊಳರಿಯಬೇಕರಿವನ್ನಬರ ಗುಹೇಶ್ವರನೆಂಬ ಕುರುಹಾಯಿತು ||೨೩||

ಲಿಂಗಸುಖಸಂಗದೊಳ್ ಮನವೇದ್ಯವಾಯಿತ್ತು
ಪಿಂಗದಿಹ ನಿರವಯಲದಿನ್ನೆಂದಿಗೈಯೆನಗೆ
ಭಂಗವಿಲ್ಲದ ನಿಮ್ಮ ಸಂಗವಿನ್ನೆಂದಿಗೈ ಪರಮ ಸುಖ ಪರಿಣಾಮದೆ ||
ಅಂಗವಿಸುತಂ ಮನವು ಮೇರೆದೊಪ್ಪುತೆ ನಾನು
ಪುಂಗಲದ ನಿಜವನ್ನೈದುವ ಪರಿಯ ಪೇಳಯ್ಯ
ಜಂಗಮ ಪ್ರಭು ಚೆನ್ನಮಲ್ಲಾರ್ಯ ನೀನೆನಲು ಕೇಳಿ ಪ್ರಭುವರೆದನಾಗ || ೭೪ ||

ನೀನು ನಾನೆಂಬುಭಯ ಸಂಗವಳಿಧಾಗಳುಂ
ತಾನೆ ತಾನಾದಾತ್ರಿಕೂಟವೆಂಬುವ ಗಿರಿಯ
ಸಾನುವಂ ಪೊಂದುತ್ತೆ ತುಟ್ಟತುದಿಯುಂ ಮೆಟ್ಟಿನೋಡಲದು ಬಟ್ಟಬಯಲು ||
ಕಾಣಬಹುದೌ ನಿರಕಿಸಾಬಯಲ ಬೆರಿಸುವರೆ
ಕಾಣಬಾರದ ಕದಳಿಯುಂಟಲ್ಲಿ ಪರಕಿಸೌ
ಜ್ಞಾನದಿಂದಂ ಕದಳಿಯಾ ಕಳದಲೊಳಪೊಕ್ಕು ನೋಡೆ ತೊಳಗುತಿ
ಬೆಳಗುವಾ || ೭೫ ||

ಜ್ಯೋತಿಯುಂಟೌ ನೋಡು ನಡೆಯಲ್ಲಿಗಂ ತಾಯೆ
ಖ್ಯಾತವಹ ಗುರುಗುಹೇಶ್ವರಲಿಂಗದೊಳಗೆ ಪರ-
ಮಾತಿಶಯಪದವು ಸ್ವಯಮುಪ್ಪುದೌ ನಿನಗೆನಲ್ಕೊಪ್ಪಿ ನುಡಿದಳು ಶರಣೆಯು ||
ಓತು ಮಾಟದ ಕೂಟವಾಯಿತ್ತು ಬಸವಣ್ಣ-
ಗೋತು ನೋಟದ ಕೂಟವಾಯಿತ್ತು ಪ್ರಭುದೇವ-
ಗೋತು ಭಾವದ ಕೂಟವಾಯಿತಜಗಣ್ಣಂಗೆ ಸ್ನೇಹದಾಕೂಟವಾಯಿತು || ೭೬ ||

ಓತು ಸೊಡ್ಡಳದ ಬಾಚರಸಂಗೆ ತಿಳಿಯಿರೈ
ಜ್ಯೋತಿವರ ಕೂಟವಾಯಿತು ಚೆನ್ನಬಸವಣ್ಣ-
ಗೋತೆನಗೆ ನಿಮ್ಮಲ್ಲಿಯವಿರಳದ ಕೂಟವೈ ಚೆನ್ನಮಲ್ಲಾರ್ಯನೆನುತಾ ||
ಓತು ಮಾಟದಕೂಟವಿಲ್ಲ ಬಸವಣ್ಣಂಗ-
ಮೋತು ನೋಟದ ಕೂಟವಿಲ್ಲ ಪ್ರಭುದೇವಂಗ-
ಮೋತು ನೋಟದ ಕಪಟವಿಲ್ಲವಜಗಣ್ಣಂಗೆ ಸ್ನೇಹದಾಕೂಟವಿಲ್ಲಾ || ೭೭ ||

ಓತು ಸೊಡ್ಡಳದ ಬಾಚರಸಂಗೆ ತಿಳಿಯಿರೈ
ಯ್ಯೋತಿವರ ಕೂಟವಿಲ್ಲೈ ಚೆನ್ನ ಬಸವಣ್ಣ-
ಗೋತೆನಗೆ ನಿಮ್ಮ ಕೂಟವದಿಲ್ಲ ಚೆನ್ನಮಲ್ಲಾರ್ಯನೇಯೆಂದೊರಿಯುತಾ ॥
ಓತು ಭಕ್ತೆಯೆನಿಪ್ಪೆ ಕತ್ರುಭ್ರುತ್ಯತೆಯರಿಯೆ-
ನೋತು ಮಾಹೇಶ್ವರಿಯೆನಿಪ್ಪೆನೈ ವ್ರತವರಿಯೆ
ನೋತು ಪ್ರಾಸಾದಿಯಾನಪ್ಪೆನೈಯರ್ಪಿತವನರ್ಪಿತವ ನಾನರಿಯನೈ ॥ ೭೮ ॥

ಪ್ರಾಣಲಿಂಗಿಯೆನಿಪ್ಪೆನನುಭಾವ ಗತಿಯರಿಯೆ
ನಾನು ಶರಣೆಯನಿಪ್ಪೆ ಸತಿಪತಿಗಳಿರವರಿಯೆ
ನಾನೈಕ್ಯಳೆನುಸುವೆನು ಬೆರಿಸಿ ಭೇದವನರಿಯೆ ಚೆನ್ನಮಲ್ಲಾರ್ಯವರನೆ ॥
ಸಾನುರಾಗಮೆನೆ ಷಟ್‌ಸ್ಥಲದಲ್ಲಿ ನಿಃಸ್ಥಲದ-
ನೂನ ವರ್ತನಪರಿಜ್ಞಾನಿಯುಸಿಸುವೆನೈಯ್ಯಾ
ನಾನೆನುತೆ ಶ್ರೀಗಿರಿಗೆ ಪ್ರಸ್ಥಾನಸಿದ್ಧಳಾಗಿಂತು ಶರಣರಿಗೊರೆದಳು ॥ ೭೯ ॥

ಒಡಲಿರದ ನುಡಿಯಿರದ ಕಡೆಯಿರದ ನಲ್ಲನಿಂ।
ದೊಡಗೂಡಿ ಸುಖಿಯಾದನೈ ಕೇಳಿ ನುಡಿಗಡಣ-
ವೊದಲ ಮೋಸರವಿಲ್ಲಮೋಸರಿಸೆನಿತರಕ್ಕ ಮೆಳೆಶೆನೈಯನ್ನ ಸುಖಕೆ ॥
ಬಿಡದಲಾರಳಿದು ಮೂರಾಗಿ ಮೂರಳಿಯುತೆರ-
ರಿಡಿಯುತ್ತೆರಡಳಿಯುತೊಂದಾಗಿ ನಿಂದೆನು ನೋಡಿ-
ರೊಡೆಯ ಬಸವಣ್ಣಮೊದಲಾದ ಶರಣರಿಗೆಲ್ಲ ಶರಣಾರ್ಥಿ ಪ್ರಭುವಿನಿಂದಾ ॥೮೦॥

ಕೃತಕೃತ್ಯಳಾದನೈ ಮರೆಯದಿರಿ ನಿಮಗಾನು
ಸುತೆಯೆಂದು ತಿಳಿಯುತೆನ್ನಂ ಚೆನ್ನಮಲ್ಲನೊಳು
ಹಿತದಿಂದೆ ಬೆರೆಯೆಂದು ಹರಸುತಿಹುದೆಂದು ಬೇಡುತ್ತೆ ಮತ್ತೊರೆದಳಾಗ ॥
ಕ್ಷಿತಿಯಲ್ಲಿ ಹುಟ್ಟಿದೆನು ಗುರುಕರಾಬ್ಜದೊಳಾನು
ಶ್ರಿತಳಾಗಿ ಬೆಳೆದೆ ನಾನಗಣಿತರ ಕೃಪೆಯೊಳಗೆ-
ಮತಿಶಯಿತ ಭಾವವೆಂಬುವ ಹಾಲು ಸುಜ್ಞಾನವೆಂಬ ಘೃತವಾಗೆ ಮತ್ತೆ ॥೮೧॥

ಪರಮಾರ್ಥವೆಂಬ ಸಕ್ಕರಿಯನಿತ್ತರು ನೋಡಿ
ನೆರೆ ತ್ರಿವಿಧ ಸದಮೃತವ ದಣಿಯಲೆರೆಯುತ್ತೆ ಸಲೆ
ಪೊರೆದರೆನ್ನಂ ವಿವಾಹವ ಮಾಡಿ ಸೊಯವೆನಿಪ ಗಂಡಂಗೆ ಕೊಟ್ಟರೊಲಿದು ||
ನೆರೆಕೊಟ್ಟ ಮನೆಗೆ ಕಳುಹಿಸಲೆಂದಸಂಖ್ಯಾತ-
ಶರಣರೆಲ್ಲರು ಬಂದಿರ್ಪೈ ನೀವು ಬಸವಣ್ಣ-
ನುರೆ ಮೆಚ್ಚಲೊಗೆತನವ ಮಾಡುವೆನು ಚೆನ್ನಮಲ್ಲನ ಕೈಯಪಿಡಿದು ನಿಮ್ಮ ||೮೨||

ತಲೆಗೆ ಪೂವಂ ತಾಹೆನಲ್ಲದಲೆ ಹುಲ್ಲತಹೆ-
ನೊಲೆಯುತವಧರಿಪುದ್ಯೆ ನಂಬುತಂ ಮರಳಿ ನೀ-
ವಲೆದು ಬಿಜಯಂಗೈಯುದ್ಯೆಯ ಶರಣಾರ್ಥಿಯೆಂದೆರಗಿ ಪೊರಡುತೆ ಶೋಕದೆ ||
ನಲೆದು ಕಳುಹಲ್ ಬಂದ ಶರಣರಿಗೆ ಕೈಮುಗಿದು
ಸಿಲುತೆ ಪೋಗುತ್ತೆ ಮರಮರಳಿ ನೋಡುತ್ತೆ ಮ-
ತ್ತಲುದು ಪೋಗುತ್ತೆ ನಡೆದಳು ಮಹಾದೇವಿಯಕ್ಕನು ಮನದೊಳುಂಮುಳಿಸುತಾ ||೮೩

**ಅಂತು ಸಂಧಿ ೮ ಕ್ಕಂ ಪದಗಳು ೪೮೯ ಕ್ಕಂ ಮಂಗಲಂ**

|| ಶ್ರೀಗುರು ಸಿದ್ಧಲಿಂಗಾಯ ನಮಃ ||

# ಶ್ರೀ ಅಕ್ಕಮಹಾದೇವೀ ಪುರಾಣಂ

## ೯ ನೇ ಸಂಧಿ ಪ್ರಾರಂಭ

**ಸೂಚನೆ—** ಶರಣೆ ಜಗವೆಲ್ಲಮಂ ಶಿವನ ರೂಪಾಗಿ ತಾ-
ನರಿಯುತಂ ನಲೆಯುತಂ ಶಿರಿಗಿರಿಯ ಸೇರುತಂ
ಭರದಿಂದೆ ಕದಳಿಯಂ ಪೊಂದಿ ಹರನೋಳ್ ಬೆರೆದಳಾ
ಅಕ್ಕಮಾದೇವಿಯು ||

**ಸ್ತೋತ್ರ—** ಬೇಡಿದವರಿಂಗಾನು ಬೇಡಿದುದ ನೀವೆನೆಂ-
ದಾಡಿರ್ಪ ಬಸವರಸನಾ ಪ್ರತಿಜ್ಞೆಯ ಕೇಳ್ದು
ನಾಡೆ ಪರಿಕಿಪೆನೆಂದು ನೆನೆದಂದೈದುತಾರೋಗಿಸಲ್
ತೊಡಗುತಾ ||
ಮಾಡಿರ್ದ ಪಾಕವೆಲ್ಲವನುಂಡು ಧಾನ್ಯಮಂ
ಬೇಡಿ ನೀಡಿಸಿಕೊಂಡು ಮುಗಿಸೆ ಮಾಯೆಯೊಳಾಗ
ಕಾಡಿ ತದಹಂಕಾರಮಂ ಸೆಳೆದು ಪೊರೆದಂತೆ ಸಲಹಲಾ
ಪ್ರಭುವೆನ್ನನು ||೧||

ಇಂತಖಿಲ ಶರಣರಿಂ ಬೀಳ್ಕೊಂಡು ಮಾದೇವಿ
ಕಾಂತ ಕಲ್ಯಾಣ ಪುರದಿಂದೆ ಪೊರಮಟ್ಟಳಿತಾ-
ನಂತರಂಗದೆ ನೆನೆದು ಶರಣ ಸಮ್ಯಗ್ಜ್ಞಾನ ಘನಸುಖಪರಾನುಭವವ ||
ಅಂತು ಘಟಿಸಿದ ತದ್ವಿಯೋಗವನು ನೆನೆಸುತ್ತೆ
ಚಿಂತಿಸುತೆ ದುಃಖದಿಂ ಮಿಗೆ ತೊಳಲಿ ಬಳಲುತ್ತೆ
ಸಂತಸದ ಸುಳಿವಡಗಲಾ ಶರಣೆಯಾಗಳೀ ಪರಿವಚನಮಂ ನುಡಿದಳು || ೨ ||

ಅಯ್ಯ ನಿಮ್ಮಯ ಮಹಂತರನು ಕೂಡಿದ ಸುಖವ
ಜೀಯ ನಾನುಪಮಿಸೆನು ನಿಮ್ಮ ಶರಣರ ಕೂಡು-
ತೊಯ್ಯನಗಲುತಿಹಧಾವತಿಯಿಂದೆ ಸಾವುದೇ ಕರಲೇಸು ಕಾಣಿರಯ್ಯ ||
ಅಯ್ಯ ಭೋ ಚೆನ್ನಮಲ್ಲಾರ್ಯ ನಿಮ್ಮಯ ನಿಜವ
ವೈಯಾರದಿಂದರಿದ ಮಹಿಮರಂ ತೊರೆದು ಬಿಸು-
ಸುಯ್ಯುತಿಳೆಯೊಳು ನಿಲ್ಲಲಾಗದಲೆ ಕಳವಳದೆ ನಡೆದಳು ಮಹಾ ಶರಣೆಯು ||೩||

ಇಂದ್ರನೀಲದ ಗಿರಿಯನೇರಿಕೊಳ್ಳುತ್ತೆ ಮೇಣ್-
ಚಂದ್ರಕಾಂತದ ಶಿಲೆಯನಪ್ಪಿಕೊಳ್ಳುತ್ತೆ ಮೇಣ್
ಸಾಂದ್ರಮೋದದೆ ಕೊಂಬ ಬಾರಿಸುತ ನಿಮ್ಮ ನೆನೆಯುತ್ತಲೆಂದಿರ್ಪೆನಯ್ಯ ||
ಚಂದ್ರಧರ ಮನ್ಮನೋಭಂಗವಂಗದಭಂಗ-
ವಿಂದ್ರಿಯ ವಿಭಂಗವಳಿದೆಂದು ನಿಮ್ಮೊಳು ಬೆರೆವೆ-
ನಿಂದನುತ ಚೆನ್ನಮಲ್ಲಾರ್ಯನೇಯೆಂದು ನುತಿಸುತೆ ಶ್ರೀಗಿರಿಗೆ ನಡೆದಳು ||೪||

ಒಡಲ ಕಳವಳಕಾಗಿಯಡವಿಯಂ ಪೊಕ್ಕೆನೈ
ಗಿಡಗಿಡವ ಬೇಡಿದೆನು ನಿರುತಮಂಗಕ್ಕೆಂದು
ಬಿಡದಲವು ನೀಡಿದವು ತಮ್ಮ ಲಿಂಗಕ್ಕೆಂದು ನಾ ಬೇಡಿ ಭವಿಯಾದೆನು ||
ಎಡಬಿಡದಲವು ನೀಡೆ ಭಕ್ತರಾಗಿಹವಿನ್ನು
ಪೊಡವಿಯೊಳು ನಾನು ಬೇಡಿದೆನಾದೊಡಂ ಕೇಳು
ಮೃಡ ಚೆನ್ನಮಲ್ಲಿಕಾರ್ಜುನದೇವ ನಿಮ್ಮಾಣೆಯೆನುತೆ ಬನಮಂ ಪೊಕ್ಕಳು || ೫ ||

ವನವೆಲ್ಲ ನೀವೆ ವನದೊಳಗಿರುವ ದಿವ್ಯ ತರು-
ಗಣವೆಲ್ಲ ನೀವೆ ತರುಗಳೊಳಗಾಡುವ ಸಕಲ
ಘನಖಗ ಮೃಗಂಗಳೆಂಬವು ನೀವೆ ಚೆನ್ನಮಲ್ಲಾರ್ಯನೇ ಎನಗೆ ನೀನು ||
ಅನವರತಮುಂ ಸರ್ವಭರಿತನಾಗಿಯೆ ಮುಖವ
ಬಿನದದಿಂ ತೋರೆಂದು ವಚನಮಂ ಪಾಡುತ್ತ-
ಲನಘಶರಣೆಯು ಸಿರಿಯ ಗಿರಿಯನೇರುತ್ತಿರುವ ಸಮಯದೊಳು
ನುತಿಪಳಿಂತು ||೬||

ಪರಮ ಮೂಲದ್ವಾರದುರುಬೇರ ಮೆಟ್ಟುತ್ತೆ
ಧರೆಯ ಮಂಡಲವೇರಿದೆನು ನಿರುತಮಾಚಾರ-
ದುರು ಮೂಲವರಿದೈಕ್ಯದಗ್ರಕಾನೇರಿದೆನು ವೈರಾಗ್ಯ ಸೋಪಾನದೆ ||
ಸಿರಿಯಗಿರಿಗೇರಿದೆನು ಕರವಿಡಿದುಕೊಳ್ಳಯ್ಯ
ವರ ಚೆನ್ನಮಲ್ಲಾರ್ಯನೆಂದೆನುತೆ ನುತಿಸುತ್ತೆ-
ಹರುಷದಿಂ ಶ್ರೀಗಿರಿಯನೇರಿ ಹರನೊಳಗೈಕ್ಯವಾಗಲ್ಕೆ ಬಿನ್ನವಿಪಳು ||೭||

ಚರಿಪ ಕ್ರಿಯೆಯುಳ್ಳೊಡೊಂದಾಸೆ ಸದ್ಭಕ್ತರಾ-
ಸರಸ ವಚನವದುಳ್ಳೊಡೊಂದಾಸೆ ಶ್ರೀ ಗಿರಿಯ-
ನಿರದೇರಿ ನಿಮ್ಮ ಬೆರಸಿದರೆ ಯೆನ್ನಾಸೆಗಿದು ಕಡೆಯಲ್ತೆ ಮತ್ತಾವುದು ||
ನೆರೆಕಾಂಕ್ಷೆಯಿಲ್ಲದಲೆ ನಿಮ್ಮ ನಂಬುತೆ ಕೆಟ್ಟೆ-
ನರಿಯಯ್ಯ ಚೆನ್ನಮಲ್ಲಾರ್ಯ ನೀನೆಂದೆನುತ-
ಲುರೆ ವಚನಮಂ ಮತ್ತೆ ರಚಿಸಿ ಪಾಡುತಲಿರ್ದಳೈಕ್ಯಸುಖಮಂ ನೆನೆಯುತ ||೮||

ನೆರೆ ಬಯಲ ಲಿಂಗವೆಂಬೆನೆ ಬಗೆದು ನಡೆವಲ್ಲಿ
ಬರಿದೆ ಹೋಯಿತ್ತು ಬೆಟ್ಟವ ಲಿಂಗವೆನ್ನುವೆನೆ
ನೆರೆಮೆಟ್ಟ ನಿಂದಲ್ಲಿ ಹೋಯಿತ್ತು ವೃಕ್ಷಾದಿಗಳ ಲಿಂಗವೆಂಬೆನೇ ಕೇಳ್ ||
ತರಿದಲ್ಲಿ ಹೋಯಿತ್ತು ಲಿಂಗ ಜಂಗಮುದ ಸ-
ಚ್ಚರಣವೇ ಗತಿಯೆಂದು ನಂಬಿ ಸಂಗನ ಬಸವ-
ನುರುವಚನಮಂ ಕೇಳ್ದು ಕೆಟ್ಟೆನೈ ಚೆನ್ನಮಲ್ಲಾರ್ಯ ಶಿವ ದೇವದೇವ ||೯||

ಬೆರಸುವರೆ ಬೇಗ ತೋರಯ್ಯ ಹೊರಹಾಕದಿರು
ಹರನೆ ನಿಮ್ಮಲ್ಲಿ ಸಲೆಸಂದ ತೊತ್ತಾನು ಪೊರೆ
ಹೊರಹಾಕದಿರು ಚೆನ್ನಮಲ್ಲಿಕಾರ್ಜುನ ನಿಮ್ಮ ನಂಬಿ ಬೆಂಬಳಿ ಬಂದೆನು ||
ಕರೆದಿಂಬುಗೊಳ್ಳಯ್ಯ ಎನುತೆ ಮಾದೇವಿಯಾ
ಪರಮ ಸಮರಸಸುಖವ ಶೀಘ್ರದಿಂ ಬಯಸುತ್ತೆ
ಶರಣೆ ವಿಕಳಾವಸ್ಥೆಯಿಂ ಬಂದು ಕದಳಿಯಂ ಕಂಡು ಪಾಡಿದಳೀಪರಿ || ೧೦ ||

ವನವೆಲ್ಲ ಕಲ್ಪತರು ಗಿಡವು ಮರುಜೀವಣಿಯು
ಘನ ಪರುಷಮೆಲ್ಲಶಿಲೆಯವನಿಯೆಲ್ಲಂ ದೇವ
ವಿನುತ ಸುಕ್ಷೇತ್ರವಿಲ್ಲಿಯ ಜಲವು ಸುಧೆಯೆಲ್ಲ ಮೃಗಗಳಾಪರುಷ ಮೃಗವು ||
ಅನಿತು ಹರಳೆಲ್ಲ ಚಿಂತಾಮಣಿಯು ಚೆನ್ನಮ-
ಲ್ಲನ ಮೆಚ್ಚುತುರುಗಿರಿಯ ಸುತ್ತಿನೋಡುತೆ ಬರುತ-
ಲನಘ ಕದಳಿಯ ಕಂಡೆ ನಾನೆಂದು ಶಿವಶರಣೆ ಬಾಗಿಲೊಳು ನಿಂದು
ಮುದದೆ || ೧೧ ||

ಕರದಿಷ್ಟಲಿಂಗಮಂ ತೂರ್ಯದಿಂ ಜ್ಞಾನದುರು-
ತರ ಸುಪ್ರಭಾವದೊಳು ನುತಿಸುತಿರಲಂತರಂ-
ಗುರುಚಿರದ ಚಿತ್‌ಪ್ರಕಾಶವೆ ಬಹಿಷ್ಕರಿಸುತ್ತೆ ಜಂಗಮಾಕಾರವೆತ್ತು ||
ಮಿರುಗುತಿಹ ಕೆಂಜಡೆಗಳಿಂ ಮಿಸುಪ ಸುಲಿಪಲ್ಗ-
ಳುರೆ ಕಣ್ಗಳೋಜದಿಂ ದರಹಸಿತವದನದಿಂ
ವರರತ್ನಮುಕುಟದಿಂ ಬೆಳಗುತ್ತೆ ಪ್ರತ್ಯಕ್ಷವಾಗಿರೆ ನುತಿಪಳು || ೧೨ ||

ಹೊಳೆವ ಕೆಂಜಡೆಯ ಮಣಿಮುಕುಟದೊಪ್ಪುವ ಮಿಸುಪ
ಸುಲಿಪಲ್ಲನಗೆಮೊಗದ ಕಾಂತಿಯಿಂದೀರೇಳು
ನೆಲವ ಬೆಳಗುವ ದಿವ್ಯ ರೂಪಮಂ ಕಂಡೆ ನಾಂ ಕಂಡೆನ್ನ ಕಣ್ಣಬರವು ||
ಫೆಳಿಲನೇ ಪಿಂಗಿತ್ತು ಗಂಡ ಗಂಡರನೆಲ್ಲ
ಸಲೆಪೆಂಡರಂಗೈಯುಯುತಾಳುವ ಗೊರವನಕಂಡೆ
ನಲಿದಾನು ಜಗದಾದಿಶಕ್ತಿಯೊಳು ಬೆರಿಸಿ ಮಾತಾಡುತಿರುವೆನ್ನಪರಮ || ೧೩ ||

ಗುರುವೆನ್ನ ಮಲ್ಲಿಕಾರ್ಜುನನ ನಿಲವನು ಕಂಡು
ನೆರೆ ಜೀವಿಸಿದೆನೆಂದು ತಜ್ಜಂಗಮನ ನುತಿಸಿ-
ಯೆರಗುತಲೆ ದೇವ ಭೂಜನಗಳುಪಟಳಕಂಜಿ ನಿಮ್ಮವರ ಮರೆಹೊಕ್ಕೆನು ||
ಶರಣ ಕರುಣೆಯ ಪಡೆದು ನಿಮ್ಮ ಶ್ರೀಮೂರ್ತಿಯನು
ನಿರುಕಿಸಿದೆನೆನ್ನ ನಿಮ್ಮೊಳಗೈಕ್ಯವಂಗೊಳಿಸು
ವರ ಚೆನ್ನಮಲ್ಲಾರ್ಯ ನೀನೆಂದು ಬಿನ್ನೈಸಲಾಗ ಚರವರನು ನುಡಿದಾ ||೧೪||

ನವಕದಳಿಯೀ ತನುವು ನವಕದಳಿಯೀ ಮನವು
ನವಕದಳಿ ಯೀ ವಿಷಯಮುರು ಕದಳಿಭವವನವು
ನವಕದಳಿಯಂ ಗೆದ್ದು ಬಂದು ನವಕದಳಿಯೀ ವನದಲ್ಲಿ ತವೆ ಬದುಕಿದೆ ||
ಭವಗೆಟ್ಟು ಬಂದಿಯಾ ಮಗಳೆ ಬಾರೆಂದೆನುತೆ
ಶಿವಜಂಗಮಂ ಕರೆದು ಬಿಗಿದಪ್ಪುಲಾ ಶರಣೆ
ತವಕದಿಂ ತದ್ ಹೃದಯಕಮಲದೊಳಗಡಗುತ್ತಲಿಂತೆಂದಳಾದೇವಿಯು || ೧೫ ||

ಶಿವಲಿಂಗವೆನ್ನೆ ಶಿವಲಿಂಗೈಕ್ಯವೆನ್ನೆ ನಾಂ
ತವೆಸಂಗವೆನ್ನೆ ನಾಂ ನಿಸ್ಸಂಗವೆನ್ನೆ ನಾಂ
ಭುವಿಯೊಳಾಯಿತ್ತೆನ್ನೆನಾಗದೆನ್ನೆನು ಮತ್ತೆ ನೀನೆನ್ನೆ ನಾನೆನ್ನೆನು ||
ಧವ ಚೆನ್ನ ಮಲ್ಲಿಕಾರ್ಜುನನ ಲಿಂಗದೊಳು ನಾನು-
ಮವಿರತಂ ಲಿಂಗೈಕ್ಯವಾಗಲ್ಕೆ ಮತ್ತೆ ನಾ-
ನವಿರಳಂ ಮರೆಯದಿರ್ದಪೆನೆಂದು ಮಾದೇವಿಯಡಗಿದಳ್ ಸ್ವಾನಂದದೆ || ೧೬ ||

ನಿರುಕಿಸಿದರಿದನತ್ತಲಾ ಚೆನ್ನಬಸವಾದಿ-
ಶರಣರೆಲ್ಲರು ಜ್ಞಾನದೃಷ್ಟಿಯೊಳು ಕಲ್ಯಾಣ-
ಪುರದುರುಶಿವಾನುಭವ ಮಂಟಪದೊಳಿರ್ದು ಸಮ್ಮತಿಸಿ ನುಡಿದಿಹರೆಂತೆನೆ ||
ಉರುತನುವಿನೊಳಗಿರ್ದು ತನುವ ಗೆದ್ದಳು ಮತ್ತ
ಮುರುಮನದೊಳಿರ್ದು ಮನಮಂ ಗೆದ್ದಳವಳು ಮ-
ತ್ತುರು ವಿಷಯದೊಳಗಿರ್ದು ವಿಷಯಮಂ ಗೆಲ್ದಿರುವಳಂಗಸಂಗವ ತೊರೆಯುತಾ||೧೭

ಭವವ ಗೆದ್ದಿಹಳು ಕೂಡಲ ಚೆನ್ನಸಂಗನಾ-
ನವ ಹೃದಯ ಕಮಲಮಂ ಬಗೆದು ಹೊಕ್ಕಿರದೆ ನಿಜ-
ಶಿವಪದವನೈದಿದ ಮಹಾದೇವಿಯಕ್ಕನುರು ಪಾದಕೆ ನಮೋಯೆಂಬೆನು ||
ಒರೆದನಾ ಮಾಚರಸನಿಂತು ಕಣ್ ನೋಟವದು
ಕರತಲದ ಪ್ರಾಣವದುಮಂಗದ ವಿಕಾರಮುಂ
ನಿರುವಿಕಾರವೆನಿಕ್ಕುಮಾಸಂಗ ಸುಖವು ನಿಸ್ಸಂಗವಾಯಿತ್ತರಿದೆನೆ || ೧೮ ||

ಹೆಂಗಸೆಂಬುವ ಭಾವ ಬಯಲ ಬೆರೆಸಿತ್ತು ಸತ್-
ತುಂಗ ಕಲಿದೇವ ದೇವನನೊಲಿಸಿಯೊಂದಾದ
ಮಂಗಲ ಮಹಾದೇವಿಯಕ್ಕಗಳ ಶ್ರೀಪಾದಮಂ ನೆನೆದು ಬದುಕಿರುವೆನು ||
ಪಿಂಗದಿಂತೆಲ್ಲ ಕಲ್ಯಾಣ ಶರಣರು ನೆನೆಯೆ
ಭಂಗವಿಲ್ಲದೆ ಮಹಾದೇವಿ ಕೈಲಾಸದೊಳು
ಸಿಂಗರದೆ ಶಿವನೆಡಕೆ ಕುಳ್ಳಿರುತ್ತಲ್ಲಮನ ನುತಿಸಿದಳು ನಲಿದೆಂತೆನೆ ||೧೯||

ನಿರಘ ನಿರ್ದ್ವಂದ್ವ ನಿತ್ಯಾನಂದ ನಿಶ್ಶೂನ್ಯ
ನಿರವಯವ ನಿರ್ಲೇಪ ನಿರ್ಮಾಯ ಚಿನ್ಮಾನ್ಯ
ನಿರುಪಮಿತ ನಿರ್ವೇದ್ಯ ನಿರವದ್ಯ ಸದನಾದ್ಯನಿಷ್ಪಾದ್ಯ ಸಾಧ್ಯ ವಿದ್ಯ ||
ನಿರಪಾಯ ನಿರ್ಮೇಯ ನಿರ್ಗೇಯ ನಿರ್ಧ್ಯೇಯ
ನಿರುದಯ ನಿರಾಮಯ ನಿರಾಹ್ವಯ ನಿರಾಧಾರ
ನಿರುಪಾಯ ನಿಷ್ಕಾಯ ನಿರ್ಮಲ ನಿರಂಜನ ಕಲಾಮಯ ಪ್ರಭುವರ ಜಯ ||೨೦||

ಇಂತು ನುತಿಸಲ್ಕೆ ಶಿವನಾಲಿಸುತೆ ಮುದಿಸಲ್ಕೆ
ಶಾಂತರೊಸೆದೊಪ್ಪಲ್ಕೆ ಕೈಲಾಸಸಭಿಕರುನಿ-
ತಾಂತಮೆನೆ ಪೊಗಳಲಾದದು ಪ್ರಭುವಿನುರುಮಹಿಮೆಯಂ ಬಣ್ಣಿಸುತೆ ನಲಿಯುತೆ ||
ಅಂತಕಾಂತಕ ನಿರಂಜನ ಕಲಾರೂಪ ಜಯ
ಕಂತುಮರ್ದನ ಸಚ್ಚಿದಾನಂದಪೂರ್ಣ ಜಯ
ಶಾಂತಿವಲ್ಲಭ ನಿಷ್ಕಲಾತ್ಮಕ ವಿಭೂತ್ತಮ ಜಯಾಲ್ಲಮ ಪ್ರಭುವೆಯೆನುತಾ ||೨೧||

ಗುರು ಕುಮಾರೇಶಕರುಣೆಯ ಪಡೆದ ಪಂಚಾಕ್ಷ-
ರರುಚಿರಾಖ್ಯನ ಕೃಪಾಸತ್ರದೊಳಗಿದ್ದು ಶ್ರನು-
ವೆರಸುಭಯಗಾನ ಸದ್ವಾದನ ಸುಗೀರ್ವಾಣ ಕರ್ನಾಟ ಭಾರತೋಕ್ತಿ ||
ಪರಮಸಾಹಿತ್ಯಮುಂ ಕಲಿತು ಜನ್ಮಾಂಧನೆನಿ-
ಸಿರುವ ಪುಟ್ಟಾರ್ಯ ಕವಿಯೊರೆದಕ್ಕಮಾದೇವಿ-
ಯುರುಪುರಾಣದೆ ಮೂರನೆಯ ಕಾಂಡಂ ಮುಗಿದುದಾ ಗುರುಚರರು
ನಲಿಯಲು || ೨೨ ||

ಬರೆದೆನೀಯಕ್ಕ ಮಾದೇವಿಯ ಪುರಾಣವನು
ಗುರುಚರರು ನಲಿಯಲ್ಕೆ ಮುಗಿಸಿದೆನು ಶ್ರಾವಣದೆ
ದುರಿತದವಿರೋಧಿನಾಮಕವತ್ಸರವದಿದನೆ ಪ್ರಾರಂಭಿಸಿದ ಸಮಯವು ||
ಪರಮ ಪಂಚಾಕ್ಷರ ಗುರೂತ್ತಮನ ಪುಣ್ಯತಿಥಿ-
ಯುರೆ ಜ್ಯೇಷ್ಠ ಬಹುಳ ಪಂಚಮಿಯಹುದು ಗದುಗಿನುರು-
ತರ ಮಹಾವಿರೇಶ ಪುಣ್ಯಾಶ್ರಮಸ್ಥಲದೆ ಗುರುವಿನುರೆ ಗದ್ದುಗೆಯೊಳು || ೨೩ ||

ವಿರಚಿಸಿದೆನುರು ಭಕ್ತರೊಪ್ಪುತಿರಲೀ ಮಹಾ-
ಶರಣೆಯ ಚರಿತ್ರವಿದನೀ ಪುರಾಣವೆನಿಪ್ಪ
ವರದೇಹದೊಳ್ ಮೆರೆವ ನವಚಕ್ರಮಧ್ಯಾಯ ಮೊಂಬತ್ತನುಂ ತಿಳಿಯುತಾ ||
ಮೆರೆವ ಚಿದ್ರೂಪವನೆ ಕಂಡು ಸಮ್ಮುದಿಪರ್ಗೆ
ಪರಶಿವಾನಂದಮುದು ಕೈಸಾರುತಿಹುದು ಸಲೆ
ಧರೆಯ ಭೋಗಗಳ ಸಿದ್ಧಿಗಳ ಸ್ವರ್ಗಾದಿ ಪದವಿಗಳ ಮಾತೇನರಿಯಲು ||೨೪||

ಜಯ ಜಯ ಶ್ರೀಗುರುವರೋತಮ ಮನೋಧಾಮ
ಜಯಜಯಾನಂದ ಚಿದ್ಧರ್ಮ ಭಕ್ತಿಪ್ರೇಮ
ಜಯ ಜಯಾನುಪಮ ಶಿವಯೋಗಮಂದಿರ ಪರಮ ಶೋಭಾಯಮಾನಪ್ರಭಾ ||
ಜಯ ಜಯ ನಿರಾಧಾರ ಜಯ ಜಯ ನಿರಾಕಾರ
ಜಯ ಜಯ ನಿರಾಭಾರ ಜಯ ಜಯ ಸದವತಾರ
ಜಯ ಜಯ ಮಹೋದಾರ ಎಡೆಯೂರ ತೋಂಟದ ಮಹಾ ಸಿದ್ಧಲಿಂಗೇಶ್ವರಾ ||೨೫

ಅಂತು ಸಂಧಿ ೯ ಕ್ಕಂ ಪದಗಳು ೫೧೪ ಕ್ಕಂ

ಮುಗಿದುದು.

## ಗದಗಿನ ಶ್ರೀ ವೀರೇಶ್ವರ ಪುಣ್ಯಾಶ್ರಮದಲ್ಲಿ ದೊರೆಯುವ ಗ್ರಂಥಗಳು



೧. ಶ್ರೀ ಅಕ್ಕಮಹಾದೇವಿ ಪುರಾಣ ( ಪುಟ್ಟರಾಜಕೃತ )

೨. ಶ್ರೀ ಗಾನಯೋಗಿ ಪಂಚಾಕ್ಷರ ಪುರಾಣ
( ಶ್ರೀ ಹುಕ್ಕೇರಿ ಸದಾಶಿವಶಾಸ್ತ್ರಿಕೃತ )

೩. ಶ್ರೀ ಪಂಚಾಕ್ಷರ ಗವಾಯಿಗಳ ನಾಮಾವಳಿ ( ಸೊಕ್ಕಿ ಸಿದ್ವೀರಪ್ಪ ಕೃತ )

೪. ಶ್ರೀ ಪಂಚಾಕ್ಷರ ಗವಾಯಿಗಳ ನಾಮಾಂಕಿತ ವಚನಪುಸ್ತಕ
( ದೊಡ್ಡಾರ್ಯ ಆದಾಪುರ ಇವರಕೃತಿ )

## ಪುಟ್ಟರಾಜಕೃತ ( ನಾಟಕಗಳು )

೫. ಶ್ರೀ ಶಿವಶರಣೆನೆಲ್ಲೂರ ನಂಬೆಕ್ಕ

೬. ಶ್ರೀ ಶಿವಶರಣ ಚನ್ನಯ್ಯ

### ( ಅಚ್ಚಿನಲ್ಲಿರುವ ಪುಸ್ತಕಗಳು )

೭. ಹಿಂದಿ ಬಸವೇಶ್ವರ ಪುರಾಣವು

೮. ಬಸವೇಶ್ವರ ನಾಟಕ ( ಪೌರಾಣಿಕ )

೯. ಸವತಿ ಮತ್ಸರ ,, ( ಪೌರಾಣಿಕ )

೧೦. ದೇವರ ದುಡ್ಡು ,, ( ಪೌರಾಣಿಕ )

೧೧. ಶ್ರೀ ಶಿರಹಟ್ಟಿ ಫಕೀರಸ್ವಾಮಿ ,, ( ಐತಿಹಾಸಿಕ )

೧೨. ರತ್ನಹಾರ ,, ( ಸಾಮಾಜಿಕ )

೧೩. ಮಿಂಚು ,, ( ಸಾಮಾಜಿಕ )

೧೪. ಸತೀಸುಕನ್ಯಾ ,, ( ಪೌರಾಣಿಕ )

೧೫. ರಾಜಶೇಖರ ,, ( ಪೌರಾಣಿಕ )

೧೬. ಭಕ್ತಪ್ರೇಮಿ ಶ್ರೀಕೃಷ್ಣ ,, ( ಪೌರಾಣಿಕ )

೧೭. ಸ್ತ್ರೀಜೀವನ ,, ( ಸಾಮಾಜಿಕ )

೧೮. ಶಿರಸಂಗಿ ಲಿಂಗರಾಜ ,, ( ಐತಿಹಾಸಿಕ )

೧೯. ಅಕ್ಕಮಹಾದೇವಿ ,, ( ಪೌರಾಣಿಕ )



